Koravanji

# ಕೊರವಂಜಿ

ಫೆಬ್ರವರಿ ೧೯೫೦



ಸಂಪಾದಕರು :

ಶ್ರೀ॥ ರಾ. ಶಿ.

ಬರಹಗಾರರು :

ಶ್ರೀ॥ ವೆಂಕಪ್ಪ
ಶ್ರೀ॥ ರೇವಣ್ಣ
ಶ್ರೀ॥ ದಾಶರಥಿ ದೀಕ್ಷಿತ್
ಶ್ರೀ॥ ಮುಸ್ವಾಮಿ ಭಾವಮೈದ.
ಶ್ರೀ॥ ಅನಂತ ಪದ್ಮನಾಭಶಯನ ಶರ್ಮ
ಶ್ರೀ॥ ಅಕ್ರೂರ
ಶ್ರೀ॥ ಶಿವಣ್ಣ
ಶ್ರೀ॥ ಗಂಗಾಧರ

ಇತ್ಯಾದಿ, ಇತ್ಯಾದಿ.

ತಿಳನಗೆಯ ಮಾಸಪತ್ರಿಕೆ

ಬಿಡಿ ಪ್ರತಿ :- ಕೇವಲ ನಾಲ್ಕಾಣೆ

"ನನ್ನ ಟೀ-ಸೆಟ್ಟು ಅಪರೂಪ ಪಿಂಗಾಣಿಯಿಂದಲೇ ತಯಾರಾದುದು.!"

"[ತನ್ನಲ್ಲಿ] ಆದರೂ, ನೀನು ತಯಾರಿಸುವ ಟೀಯೇನೋ ಅಷ್ಟೇನೂ ಸಮರ್ಪಕವಾಗಿಲ್ಲ!"

ಆಹ್ಲಾದ ಮತ್ತು ಮನರಂಜನೆಗಾಗಿ ಲಕ್ಷಗಟ್ಟಲೆ ಜನರು ಟೀಯನ್ನು ಸೇವಿಸುವರು. ಹೀಗಿದ್ದರೂ, ಟೀಯನ್ನು ತಯಾರಿಸಿಕೊಡುವವರನೇಕರಿಗೆ ಉತ್ತಮ ಟೀ ಯೆಂದರೇನೆಂಬುದು ಗೊತ್ತೇ ಇಲ್ಲ ಉತ್ತಮ ಟೀಗೆ ಹೆಚ್ಚು ಬೆಲೆ ತೆರಬೇಕಾಗಿಲ್ಲ. ಪಂಚ ಸುಲಭ ಸೂತ್ರಗಳನ್ನು ಅನುಸರಿಸುವುದರ ಪರಿಣಾಮವೇ ಅದು. ನೀವು ತೆರುವ ಹಣಕ್ಕೆ ಪೂರ್ಣ ಪ್ರತಿಫಲವನ್ನೂ, ನಿಮ್ಮ ಟೀಯ ಪೂರ್ತಿ ಪರಿಮಳವನ್ನೂ ಪಡೆಯಬೇಕಾದರೆ, ಆ ಸೂತ್ರಗಳನ್ನು ಉರುವು ಹೊಡೆಯಿರಿ. ಮತ್ತು ಅವನ್ನು ನಿಮ್ಮ ಮನೆಯಲ್ಲಿ ತಪ್ಪದೆ ಅನುಸರಿಸುವಂತೆ ಮಾಡಿರಿ.

೧. ಹೊಸದಾಗಿ ಕಂದು, ಆಗತಾನೇ ಕುದಿಸಿದ ನೀರನ್ನೇ ಬಳಸಿರಿ.
2 ಬಳಸುವ ಮುಂಚೆ ಪಾತ್ರೆಯನ್ನು ಬೆಚ್ಚಗೆ ಮಾಡಿರಿ.
೩. ಒಬ್ಬೊಬ್ಬರಿಗೆ ಒಂದೊಂದು ಟೀ ಸ್ಪೂನು ತುಂಬ, ಪಾತ್ರೆಗಾಗಿ ಒಂದು ಸ್ಪೂನಿನಷ್ಟು ಉತ್ತಮ ಟೀ ಸೊಪ್ಪನ್ನು ಹಾಕಿರಿ.
೪. ಬಳಸುವ ಮುಂಚೆ ಟೀ ಸೊಪ್ಪಿಗೆ ೫ರಿಂದ ೬ ನಿಮಿಷಗಳವರೆಗೆ ಕಾಲ ಬಿಡಿರಿ.
೫. ಹಾಲನ್ನು ಕಪ್ಪಿಗೆ ಬೆರೆಸಿರಿ, ಟೀ ಪಾತ್ರೆಗಲ್ಲ.

'ಟೀ ಬಗ್ಗೆ ಸೂಚನೆ' ಎಂಬ ಚಿತ್ರ ಉಚಿತ ಪ್ರತಿ ಬೇಕೆಂದು ಕಮೀಷನರ್, ಸೆಂಟ್ರಲ್ ಟೀ ಬೋರ್ಡ್, ಪೋಸ್ಟ್ ಬಾಕ್ಸ್ ನಂ. 2172, ಕಲಕತ್ತ 1. ಇವರಿಗೆ ಬರೆದು ತರಿಸಿಕೊಳ್ಳಿರಿ.

ಈ ಪಂಚ ಸೂತ್ರ ಕ್ರಮವನ್ನನುಸರಿಸಿ

ಉತ್ತಮ **ಟೀ**



ತಯಾರಿಸಿಕೊಳ್ಳಿರಿ.

CTBX-328KN

ಸೆಂಟ್ರಲ್ ಟೀ ಬೋರ್ಡಿನವರ ಪ್ರಕಟಣೆ.

Koravanji, February 1950



ಸಂಪುಟ ೯ | ಫೆಬ್ರವರಿ ೧೯೫೦ | ಸಂಚಿಕೆ ೧೧

★★

# ಕುಹಕಿಡಿಗಳು

★★

ಜನವರಿ ೨೬ರ ಸ್ವಾತಂತ್ರ್ಯ ದಿನಾಚರಣೆಯ ಉತ್ಸಾಹದಲ್ಲಿ ತಂತಮ್ಮ ಕರ್ತವ್ಯವನ್ನು ಮರೆಯಬಾರದು ಎಂದು ಜನವರಿ ೩೦ನೆಯ ಬಾಪೂಜೀಯ ನೆನಪು 'ಹುಷಾರ್' ಕೊಡುತ್ತದೆ. ಅಲ್ಲವೇ?

*　　*　　*

ರಾಷ್ಟ್ರಾಧ್ಯಕ್ಷರ ಹೆಸರು 'ರಾಜ ಪ್ರಮುಖೇಂದ್ರ ಬಾಬು'ವೇ? ಎಂದು ಅರಿಯದವನೊಬ್ಬ ಕೇಳಿದ್ದಾನೆ.

*　　*　　*

ರಾಜ ಪ್ರಮುಖರು ಕೆಲವರು ರಾಜ್ಯ ದ್ವಿಮುಖರಾಗಿದ್ದಾರಂತೆ.

—ಈ ರಾಜ್ಯದಲ್ಲಿ ಒಂದು ಮುಖ, ವಿದೇಶಗಳ ಅತ್ತ ಇನ್ನೊಂದು ಮುಖ.

*　　*　　*

ರಾಜಾಜೀಯವರು ರಾಜಕೀಯ ಸನ್ಯಾಸಾಶ್ರಮ ತೆಗೆದುಕೊಂಡರು.

ರಾಜೇನ್‌ಬಾಬು ಅವರು ರಾಜಕೀಯ ವಾನಪ್ರಸ್ಥಾಶ್ರಮ ತೆಗೆದುಕೊಂಡರು.—(ಭಾಷಣ)

*　　*　　*

ರಿಪಬ್ಲಿಕ್ ಉತ್ಸವದಲ್ಲಿ ರಾಷ್ಟ್ರ ಪ್ರಮುಖರು ಪ್ರಮಾಣವಚನವನ್ನು ಸ್ವೀಕರಿಸಿದರಂತೆ.

—ಹಲವು ಲೇವಾದೇವಿ ಪ್ರಮುಖರು ಪ್ರಮಾಣವಚನಕ್ಕೆ ಸಹಿ ಹಾಕಿದರಂತೆ—ಸ್ಟಾಂಪು ಕಾಗದದ ಮೇಲೆ.

ಬೆಂಗಳೂರಿನಲ್ಲಿ "one way" ಹಾದಿಗಳ ರಚನೆ ನೋಡಿದರೆ, ಎಲ್ಲಾ ರಸ್ತೆಗಳೂ ಕಾಂಗ್ರೆಸ್ ವಸ್ತು ಪ್ರದರ್ಶನಾಲಯಕ್ಕೇ ಹೋಗುತ್ತವೋ ಎಂದು ಒಬ್ಬರಿಗೆ ಅನುಮಾನ ಬಂತಂತೆ.

—ಅನುಮಾನ ಸರಿಯಲ್ಲ!

* * *

ಸ್ವಾತಂತ್ರ್ಯೋತ್ಸವದ ಬಗ್ಗೆ ಜೈಲಿನಲ್ಲಿನ ಅಪರಾಧಿಗಳಿಗೆ ರಿಯಾಯಿತಿ ತೋರಿಸಿದಂತೆ— ವಿಶ್ವವಿದ್ಯಾಲಯದಲ್ಲೂ ಮೂರು ಸಾರಿ ನಪಾಸಾದವರಿಗೆ ರಿಯಾಯಿತಿ ತೋರಿಸಬೇಕು ಎಂದು ಚಳುವಳಿಹೂಡುತ್ತಿದ್ದಾರಂತೆ.

* * *

ಉತ್ತರಮುಖಿಯನ್ನು ನೋಡಿಕೊಂಡು ನಾವಿಕರು ದಡ ಸೇರುತ್ತಾರೆ.

—ಹೇಳಿಕೆ.

—ಚಂದ್ರಮುಖಿಯನ್ನು ನೋಡಿಕೊಂಡು ಹಳ್ಳಕ್ಕೂ ಬೀಳುತ್ತಾರೆ.—

* * *

ರಾಯಲ ಸೀಮೆಯವರು ಆಂಧ್ರಪ್ರಾಂತ್ಯ ರಚನೆ ಈಗಲೇ ಬೇಡ ಅಂದರಂತೆ.

—ರಾಯಲ ಸೀಮೆಯವರನ್ನು ಕನ್ನಡಿಗರು ಎತ್ತಿಕಟ್ಟಿದ್ದಾರೆ ಅಂತ ಅನ್ನುವುದು ಶುದ್ಧ ಕುಹಕ ಅಷ್ಟೇ!

* * *

ಸುಪ್ರಸಿದ್ಧ ಟೆನ್ನಿಸ್ ಆಟಗಾರರಾದ ಶ್ರೀಮತಿ ಗಸ್ಸಿ ಮೊರಾನ್‌ರವರ ಉತ್ತಮ ಕ್ರೀಡೆಯನ್ನು ನೋಡಲು ಹೋದವರಲ್ಲಿ ಹಲವರು 'ಬೈನಾಕ್ಯುಲರ್ಸ್' ತೆಗೆದುಕೊಂಡು ಹೋಗಿದ್ದರಂತೆ.

* * *

ಭಾರತದಲ್ಲಿ 'ಸಂಸಾರ'ದ ರಚನೆ ಇರುವ ತನಕ ಸಂಸ್ಕೃತಿಗೆ ಭಯವಿಲ್ಲ ಎಂದು ಕಾರ್ಡಿನಲ್ ಗಿಲ್‌ರಾಯ್ ಅವರು ಹೇಳಿದರಂತೆ.

—ಅವರು ಈ "ಹಿಂದೂ ಕೋಡ್‌ಬಿಲ್" ವಿಷಯ ಕೇಳಿದ್ದಿಲ್ಲ.—

* * *

ಶಿವರಾತ್ರಿ ಬಂತು. ಶಿವ ಶಿವ ಅಂತ ಛಳಿ ಹೋಗಿಬಿಡುತ್ತೆ, ಮತ್ತೆ ಯಾಕೆ ನಡುಗುತ್ತಿದ್ದೀ ಎಂದು ಕೇಳಿದ್ದಕ್ಕೆ, ನಡುಗುತ್ತಿದ್ದವ ಹೇಳಿದನಂತೆ ಇದು ಹೊಟ್ಟೆಗಿಲ್ಲದ ಛಳಿ ಕಣೋ ಶಿವರಾತ್ರೀಗೆ ಹೆಚ್ಚಾಗುತ್ತೆ ಅಂದನಂತೆ.

* * *

# ಉರಿಗಾಳು

ರಾಜೇಂದ್ರ ಪ್ರಸಾದರು ಮಗಧ ದೇಶದವರಾದ್ದರಿಂದ, ಅವರ ಆಸ್ಥಾನ ದಲ್ಲಿ ವಂದಿ ಮಾಗಧರ ಅವಶ್ಯಕತೆಯೇ ಇಲ್ಲವೆಂದು ಡಿಲ್ಲಿಯಲ್ಲಿ ಹೇಳಲಾಗಿದೆ.

* * *

ಇದೇ ತಿಂಗಳು ೨೩ನೇ ತಾ|| ಇಂಗ್ಲೆಂಡಿನಲ್ಲಿ ಮಹಾ ಚುನಾವಣೆಗಳನ್ನೇರ್ಪಡಿಸಿರುವರು. ...ಮಾರ್ಚಿ ತಿಂಗಳಲ್ಲಿ ಬೆಂಗಳೂರಲ್ಲಿ ನಡೆಯಬೇಕಾಗಿರುವ ಚುನಾವಣೆಗೆ, ಅದೊಂದು ಮಾದರಿಯಾಗಿರಬೇಕು, ಎಂದು ಯಾರೂ ಇಂಗ್ಲೀಷಿನವರಿಗೆ ಇನ್ನೂ ಸೂಚನೆ ಕೊಟ್ಟಿಲ್ಲವೆಂದು ತಿಳಿದು ಬಂದಿದೆ.

* * *

ಇನ್ನೂ ೧೫ ವರ್ಷಗಳೊಳಗೆ ಕ್ರಮ ಕ್ರಮವಾಗಿ ಇಂಗ್ಲೀಷ್ ಭಾಷೆಯ ಧ್ವಜವನ್ನು ನಾವು ಕೆಳಕ್ಕಿಳಿಸಬೇಕಾಗಿರುವುದರಿಂದ, ಅನೇಕ ಉತ್ಸಾಹೀ ತರುಣರು ಈ ವರ್ಷದ ಪರೀಕ್ಷೆಗಳಲ್ಲೇ ಅದನ್ನು ಆದಷ್ಟು ಕುಲಗೆಡಿಸಲು ನಿಶ್ಚಯಿಸಿರುವರಂತೆ.

* * *

“ ಸ್ವತಂತ್ರ ಭಾರತದಲ್ಲಿ ೧೭ ಕೋಟಿ ಜನರು ಮತದಾರರು, ಅಂದರೆ, ವೋಟರುಗಳಿರುವರು; ಅವರಲ್ಲಿ ೧೪ ಕೋಟಿ ಜನರಿಗೆ ಓದು ಬರಹ ಬರದು....” (ವರದಿ) ಸದ್ಯಃ ಅಷ್ಟು ಜನಕ್ಕೆ, ಪರಸ್ಪರ ದೂಷಣ ಪತ್ರಗಳನ್ನು ಓದುವ ಶ್ರಮ ತಪ್ಪಿತು.

* * *

“ ಮಹಿಳೆಯರ ರಂಗ ಮನೆ” (ಶ್ರೀ ಕಾರಿಯಪ್ಪ) ಅಂದಮೇಲೆ, ಆ ರಂಗ ದಲ್ಲಿ ಮಹನೀಯ ?....ಮಂಗ ?

* * *

“ ಮಹಿಳೆಯರು ಇತ್ತೀಚೆಗೆ ಬಂದೂಕಗಳನ್ನು ಬಯಸುತ್ತಿದಾರೆ ” (ಶ್ರೀ ಕಾರಿಯಪ್ಪ)....ನಾಳೆಯಿಂದ ಚಿಂತೆ ಇಲ್ಲ. ಹಿಂದೂ ಕೋಡ್ ಆಚರಣೆಗೆ ಬಂದುಬಿಡುತ್ತದೆ.

* * *

" ನೆಲ ಉಳಲು ಆನೆಯನ್ನೇಕೆ ಉಪಯೋಗಿಸಬಾರದು ? " ಎಂದು ಮದರಾಸಿನ ಕೌನ್ಸಿಲ್ ಮೆಂಬರ್ ಒಬ್ಬರು ಕೇಳಿದರು....ಆನೆಯನ್ನು ವಿಚಾರಿಸಿ, ಉತ್ತರ ಹೇಳುವುದಾಗಿ ಜವಾಬು ಈಯಲಾಯಿತೆಂದು ವರದಿ.

* * *

ಭಾರತ ಶಾಸನ ಸಭೆಗೆ ಕಾಂಗ್ರೆಸ್ ಮುಂದಾಳುಗಳನ್ನು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಕಳುಹಿಸಲು ಅವಕಾಶ ಕೊಡಬೇಕೆಂದು ಕೇಂದ್ರ ಸರ್ಕಾರವನ್ನು ಪ್ರಾರ್ಥಿಸುವ ನಿರ್ಣಯ ರೈತ ಸಮ್ಮೇಳನದಲ್ಲಿ ಅಂಗೀಕಾರವಾದವು .......ದೇಶ ಹಿತದ ಮೇಲಿನ ತೀವ್ರ ಆಸಕ್ತಿ ಇದರಲ್ಲಿ ಎದ್ದು ಕಾಣುತ್ತಿದೆ.

* * *

ಏಳು ತಿಂಗಳ ಅವಧಿಯಲ್ಲಿ ಹೈದರಾಬಾದ್ ಸಂಸ್ಥಾನದ ರೈಲ್ವೆ ಇಲಾಖೆಯವರು ಹತ್ತು ಲಕ್ಷ ಅರವತ್ತೆಂಟು ಸಾವಿರ ಜನರು ಟಿಕೆಟ್ಟಿಲ್ಲದೆ ಪ್ರಯಾಣ ಮಾಡಿದ್ದನ್ನು ಪತ್ತೆ ಹಚ್ಚಿ, ಶಿಕ್ಷಿಸಿದರು....ಅದಕ್ಕಾಗಿ ಅವರು ಮುಷ್ಕರ ಮುಂತಾದ ಉಗ್ರಕಾರ್ಯಕ್ರಮ ಕೈಕೊಳ್ಳದೆ, ಎಂದಿನಂತೆ ತಾಳ್ಮೆಯಿಂದ ವರ್ತಿಸುತ್ತಿರುವುದು ಸ್ತುತ್ಯಾರ್ಹ.

* * *

" ನಾಗಚಂದ್ರನ ರಾವಣ ಪಂಪನ ರಾವಣನಿಗಿಂತ ಎಳ್ಳಷ್ಟು ಕಡಮೆ ಇಲ್ಲ" (ಭಾಷಣ) ಬೇರೆ ಬೇರೆ ಗರುಡಿಯವರಾದರೂ, ಪೈಲ್ವಾನರಿಬ್ಬರಿಗೂ ಒಂದೇ ಹೆಸರಿರುವುದು ಒಂದು ಸೋಜಿಗ !

* * *

ಸ್ವಾತಂತ್ರ್ಯ ಗೀತಗಳನ್ನು ಸಕಾಲದಲ್ಲಿ ರಚಿಸಲು ಅಸಮರ್ಥರಾದ ಕೆಲವು ಕವಿಗಳಿಗಾಗಿ ಮುಂದೆ ಮಹಾಚುನಾವಣೆಗಳು ಮುಗಿದು ಹೊಚ್ಚ ಹೊಸ ಪ್ರತಿನಿಧಿ ಸಭೆಗಳು ಸೇರಿದಾಗ ಎರಡು ದಿನದ ಉತ್ಸವಾದಿಗಳನ್ನಿಟ್ಟುಕೊಳ್ಳಬೇಕೆಂದು ಡಿಲ್ಲೀ ಸರ್ಕಾರವನ್ನು ಕೋರುವ ನಿರ್ಣಯವೊಂದು ಕವಿ ಸಮ್ಮೇಳನದ ಗಮನಕ್ಕೆ ಬರುವುದರಲ್ಲಿದೆಯಂತೆ.

* * *

ಏಕೀಕರಣ ಚಳುವಳಿಯನ್ನು ತಾತ್ಕಾಲಿಕವಾಗಿ 'ಏಕೆ ? ಈ ಕರಣ " ಚಳುವಳಿಯಾಗಿ ಮಾರ್ಪಡಿಸಲು ಕೆಲವು ಭಾಷಾ ಶಾಸ್ತ್ರಜ್ಞರು ಪ್ರಯತ್ನ ಪಡುತ್ತಿರುವರಂತೆ.

* * *

# ಕೊರವನ ಸಿಂಹಾವಲೋಕನ

"ಏನು ಧೂಳು ಅಂತೀರಿ! ಆದರೂ ಜನರ ಉತ್ಸಾಹ ಅದೆಷ್ಟು ಅಂತೀರಿ. ನಯದ ಮಾತಿಲ್ಲ ಹೌದು—ಆದರೆ ತೆರೆದ ಹೃದಯ—ಬಲು ಒಳ್ಳೆಯ ಜನ" ಎಂದ ಕೊರವ, ತನ್ನ ಕೋರೇ ರುಮಾಲನ್ನು ತೆಗೆದಿಡುತ್ತಾ.

"ಎಲಾ! ಇವಗೆಲ್ಲಿ ಬಂತು ಕೋರೇ ರುಮಾಲು, ಮೊನ್ನೆ ಮೊನ್ನೆತನಕ ಒಂದು ಹಳೇ ಕರೀ ಟೋಪಿ ಹಾಕಿಕೊಳ್ಳುತ್ತಿದ್ದ. ಇದೇನು!" ಎಂದು ಎಲ್ಲರೂ ಅವನ ಕಡೆಗೆ ನೋಡಿದೆವು.

ಅವನಂದ ಆಗ "ಸದ್ಯ, ಈ ರಿಪಬ್ಲಿಕ್ ಉತ್ಸವದ ಹೊತ್ತಿಗೆ ಆಂಧ್ರ ಪ್ರಾಂತ್ಯ ಆಗದೇ ಇದ್ದದ್ದು ಆದೋನಿಯವರ ಪುಣ್ಯ. ಇಲ್ಲದೆ ಇದ್ದರೆ ಅಲ್ಲಿ ಹೆಚ್ಚು ಸಂಖ್ಯೆಯಲ್ಲಿರುವ ಕನ್ನಡಿಗರೆಲ್ಲಾ ತೆಲುಗಿನಲ್ಲಿ ಉತ್ಸವ ಮಾಡಬೇಕಾಗಿತ್ತು. ಆದರೆ ದೇವರ ದಯೆ! ಹಾಗಾಗಲಿಲ್ಲ. ಸುಖವಾಗಿ ಸಂತೋಷವಾಗಿ ಆಚರಿಸಿದರು" ಎಂದ.

"ನಿನಗೆ ಹೇಗೆ ಗೊತ್ತು. ಕೋರೇ ರುಮಾಲು ಹಾಕಿಕೊಂಡರೇ ಗೊತ್ತಾಗಿಬಿಡುತ್ತ್ಯೇ" ಎಂದೆವು.

"ಛೇ! ಛೇ! ಆ ಉತ್ಸವಕ್ಕೆ ನನ್ನನ್ನೇ ಅಧ್ಯಕ್ಷನನ್ನಾಗಿ ಆಹ್ವಾನಿಸಿದ್ದರು. ಅದಕ್ಕೇ ಈ ರುಮಾಲು ಕೊಂಡೆ" ಎಂದ.

"ಹಾಗೋ! ಅದಕ್ಕೇ ಇಷ್ಟು ಮಮತೆ" ಎಂದು ಮೆಲ್ಲಗೆ ಅವನಿಗೆ ಕೇಳಿಸದ ಹಾಗೆ ಹೇಳಿಕೊಂಡೆವು.

* * *

"ಈ ಡಾಲರ್‌ಗಾಗಿ ನಮ್ಮ ಸರ್ಕಾರ ಯಾಕೆ ಹೀಗೆ ಅಳುತ್ತೋ ಕಾಣೆ" ಎಂದ ಕೊರವ, ಚಿಲ್ಲರೆ ಹಣವನ್ನು ಎಣಿಸಿ ಒಳಜೇಬಿಗೆ ಹಾಕುತ್ತಾ.

"ಅಳೋದ್ಯಾಕೆ? ಡಾಲರ್ ಇಲ್ಲಾ ಅಂತ, ಅಷ್ಟೆ" ಅಂದೆ.

"ಬೆಣ್ಣೆ ಇಟ್ಟುಕೊಂಡು ತುಪ್ಪಕ್ಕೆ ಅತ್ತಹಾಗೆ ನೋಡು. ಅಲ್ಲಿ, ಅಮೇರಿಕಾದಲ್ಲಿ ವೈದ್ಯಕೀಯ ಪ್ರಯೋಗ ಶಾಲೆಗಳಲ್ಲಿ ನಿರಾಹಾರದ ಖಾಯಿಲೆಗಳು,

ಸಾಂಕ್ರಾಮಿಕ ಜಾಡ್ಯಗಳು ಇವು ಏನೂ ಇಲ್ಲದೆ ಬಹಳ ಕಷ್ಟಪಡುತ್ತಿದ್ದಾರಂತೆ. ಅಲ್ಲಿಗೆ ಹೋಗಿಬಂದ ವೈದ್ಯರುಗಳು ಹೇಳುತ್ತಾರೆ. ನಮ್ಮ ದೇಶದಲ್ಲಿ ಈ ಖಾಯಿಲೆಗಳ ಸುಗ್ಗಿಯೋ ಸುಗ್ಗಿ. ಅಲ್ಲಿ ಅವಕ್ಕೇ ಕ್ಷಾಮ. ರೋಗಕ್ಕಿಷ್ಟು ಡಾಲರ್. ರೋಗಿಗೆ ಇಷ್ಟು ಡಾಲರ್ ಅಂತ ಮೇಲ್ಮಟ್ಟದಲ್ಲಿ ಆರ್ಥಿಕ ಒಪ್ಪಂದ ಮಾಡಿಕೊಂಡು, ಇಲ್ಲಿಂದ ಅಲ್ಲಿಗೆ ರೋಗಿಗಳನ್ನು ಸಾಗಿಸಿದರೆ, ಅಲ್ಲಿ ಅವರ ಪ್ರಯೋಗಗಳಿಗೂ ಅನುಕೂಲ ಆಯ್ತು, ನಮ್ಮ ರೋಗಿಗಳ ಸಮಸ್ಯೆಯೂ ಪರಿಹಾರ ಆಯ್ತು.—ಹೀಗೇಕೆ ಮಾಡಬಾರದು?" ಎಂದ.

"ಎಲಾ! ಇವನೇ! ಇದೇನೋ ಮಾರಾಟದ ಮಟ್ಟಕ್ಕೆ ರೋಗಿಗಳನ್ನು ಏರಿಸಬಹುದೇ? ಎಂದು ಕುಂದು ಕಂಡು ಬಂದರೂ, ಸಕಾರಣಗಳು ದೊರಕದೇ ಸುಮ್ಮನಿದ್ದೆ.

ಆಗಲೇ ಮಾದು ಅಂದ, "ಹೌದ್ಹಾದು, ಈ ಬುದ್ಧಿವಿಕಲ್ಪವಾದವರನ್ನು ಅಲ್ಲಿಗೆ ಮಾರಬೇಕು. ನಿನ್ನ ಮಾರಿದರೆ, ನಮ್ಮ ದೇಶಕ್ಕೆ ಕಡೇಗೆ ಹತ್ತು ಡಾಲ ರಾದರೂ ಬರಬಹುದು. ನಮಗೂ ತೊಂದರೆ ತಪ್ಪೀತು" ಎಂದ.

"ನಿಮಗೆ ತೊಂದರೆ ತಪ್ಪೋದೇನು? ನನಗೂ ಹಾಗೇ ನನಗೂ ಹಾಗೇ" ಎಂದು ಎದ್ದು ಹೊರಟ, ಕೊರವ ಚಪ್ಪಲಿಯನ್ನು ಗಿರ್‌ಗಿರ್ ಅನ್ನಿಸುತ್ತಾ.

* * *

"ಬಂದೆಯಾ!—'ನಾದ ವೈದ್ಯ ಪ್ರವೀಣ' ನಿನಗೇ ಕಾದಿದ್ದೆ" ಎಂದ ಕೊರವ, ನಾನು ಕ್ಲಬ್ಬಿಗೆ ಹೋಗುತ್ತಿದ್ದ ಹಾಗೆ.

"ನೋಡು! ಈ ಪತ್ರಿಕೆಯಲ್ಲಿ ಯಾರೋ 'ನಾಟಕದಲ್ಲಿ ಸಂಗೀತ ಇರ ಬೇಕೇ?' ಎನ್ನುವ ವಿಷಯದಲ್ಲಿ ತರ್ಕಮಾಡಿದ್ದಾರೆ. ನೀನು ಸಂಗೀತ ಶಾಸ್ತ್ರಿ, ನಟನಾ ಭೂಷಣ. ನಿನ್ನ ಕೇಳಬೇಕು ಅಂತಿದ್ದೆ. ಆ ಪ್ರಶ್ನೆಗಿಂತ ಸಂಗೀತ ದಲ್ಲಿ ನಾಟಕ ಇರಬೇಕೆ? ಬೇಡವೇ ಅದಲ್ಲವೇ ಹಿರಿಯ ಪ್ರಶ್ನೆ" ಎಂದ.

"ಸಂಗೀತದಲ್ಲಿ ನಾಟಕ ಏನು? ಗೀತಾ ನಾಟಕಗಳೇ!" ಎಂದೆ.

"ಛೇ! ಛೇ! ಅದಲ್ಲಾ! ಈ ಸಂಗೀತ ಕಛೇರಿಗಳಲ್ಲಿ ತಂಬೂರಿಯವರೂ, ತಬಲಾದವರೂ, ಪಿಟೀಲಿನವರೂ, ಕೊರಳಿಗರೂ, ಇವರು ಹಾಡೋವಾಗ ಆಡ್ತಾರಲ್ಲಾ ನಾಟಕಾ! ಅದು ಇರಬೇಕೇ ಬೇಡವೇ!" ಅಂತಂದ.

"ಅಯ್ಯೊ! ಅದನ್ನ ನಾಟಕ ಅಂತೀಯಾ! ವೈಯ್ಯನ್ನ ಸ್ವಲ್ಪ ಕುಲುಕಿಸಿ ದರೆ ಗಂಟಲು ಸರಿಯಾಗಿ ಆಡುತ್ತೆ" ಎಂದೆ.

"ಓಹೋ! ಹಾಗೋ! ಪಿಳ್ಳು ಜುಟ್ಟು ಹಾರಿಸಿದರೆ ತಾಳ ಸರಿಬರುತ್ತೋ? ಹುಬ್ಬು ಹಾರಿಸಿದರೆ ಸ್ವರಗೂಡುತ್ತೋ? ಹಲ್ಲುಕಿರಿದರೆ ಪಲ್ಲವಿ ಪಲುಕು ಬಹುದೋ? ಬಾಗಿ ಹಾಡಿದರೆ ರಾಗಮಾಲಿಕೆ ಹೊರ ಸೂಸುತ್ತೋ? ತೊಡೆ ತಟ್ಟಿದರೆ ಗಂಟಲು ಬಿಡುತ್ತೋ? ವಹವ್ವಾ! ಏನು ಚತುರತೆಯುಯ್ಯಾ! ನಿಂದು. ನಾಚಿಕೆಯಿಲ್ಲದೆ ಹೇಳಿಕೊಳ್ಳುತ್ತೀಯಲ್ಲಾ! ಕೇಳಿದರೆ ಕಿವಿಗಿಂಪಾದರೂ, ನೋಡಿ ದರೆ ವಾಕರಿಕೆ ಬರುತ್ತಲ್ಲಾ! ನಾದಪ್ರವೀಣನಂತೆ. ಅನಾಥ ಪ್ರವೀಣ!!" ಎಂದು ದಡಬಡಿಸಿದ.

ಅಬಾರ್ಜನಿ ಹತ್ತಿರ ಆರ್ಗುಮೆಂಟೇ! ಎಂದು ಸುಮ್ಮನಾದೆ.

*　　　　*　　　　*

ಅವರ್‍ಯಾರೋ! ಈಗ ಎದ್ದು ಹೋದರಲ್ಲಾ ಇಬ್ಬರು, ಹೊಸಬರಿದ್ದ ಹಾಗಿದೆ ಈ ಊರಿಗೆ ಅಂದ ಕೊರವ, ಮುಖ ಒರಿಸಿಕೊಳ್ಳುತ್ತಾ.

"ಅವರೇ! ಬೊಂಬಾಯಿಂದ ಇಲ್ಲಿಗೆ ವರ್ಗವಾಗಿ ಬಂದಿದ್ದಾರೆ. ಬಲು ಬುದ್ಧಿವಂತರಂತೆ, ಕೇಂದ್ರದವರಂತೆ" ಅಂದೆ.

"ಆಹಾ! ಇರಬೇಕು ಈಗ ತಾನೇ ಸಂಭಾಷಣೆ ಮುಗಿಸಿದರು. ಅಷ್ಟೂ ಕೇಳಿದೆ. ಬಲು ಬುದ್ಧಿವಂತರೇ ಇರಬೇಕು ಕೇಳು! ಅವರಾಡಿದನ್ನ ಹಾಗೇ ಹೇಳ್ತೀನೆ" ಅಂದ.

ಅವ—"ಮಧ್ಯಾಹ್ನ ಎಲ್ಲಿಗೆ ಹೋಗಿದ್ದೆ?"

ಇವ—"ಅಲ್ಲಿ ಇಲ್ಲಿ ಸ್ವಲ್ಪ ಸುತ್ತಾಡಿದೆ."

ಅವ—"ಏನು ಸುದ್ದಿ"

ಇವ—"ಅಂತಹದೇನೂ ಇಲ್ಲ"

ಅವ—"ಯಾರು ಸಿಕ್ಕಿದ್ದರು?

ಇವ—"ಅವರು ಇವರೂ ಸಿಕ್ಕಿದ್ದರು"

ಅವ—"ಅವರೇನಂದರು?"

ಇವ—"ಗೊತ್ತೇ ಇದೆಯಲ್ಲ ಅದೂ ಇದು"

ಅವ— "ಹಾಗಂದರೆ?"

ಇವ—"ಅಂದ ಹಾಗೆ ಅವನಿಗ್ಯಾಕೆ ಇವಳ ಮೇಲೆ ಕೋಪ"

ಅವ—"ಅವನು ಅಂದರೆ"

ಇವ--"ಅವನೇ ರಾಮು!"

ಅವ—"ಅವಳೂ ಅಂದರೆ?"

ಇವ—"ಇವನ ಹೆಂಡತಿ"

ಅವ—"ಕೋಪದ ಮಾತು ಯಾವುದು?"

ಇವ—"ನಿನ್ನ ಜತೆ ಇನ್ನು ಮೇಲೆ ಮಾತಾಡುಕ್ಕೆ ಹೋದರೆ ನನಗೆ ನರಕ ಬರಲಿ" ಎಂತ ಅಂತಾ ಇದ್ದ.

ಅವ—ಅದೇನೂ ಕೋಪದ ಮಾತಲ್ಲವಲ್ಲ. ಇದ್ದದ್ದು ಹೇಳಿದ.

ಇವ—ಅದು ಕೋಪ ಅಲ್ಲದೇ ಇದ್ದರೆ ಅವರು ಅನ್ಯೋನ್ಯ ದಂಪತಿಗಳು.

ಅವ—ಅಲ್ಲವೇ! ಅಲ್ಲವೇ!

ಎಂದು ಇಬ್ಬರೂ ಈ ಸ್ವಾರಸ್ಯವಾದ ಸಂಭಾಷಣೆ ಮಾಡಿ ಎದ್ದು ಹೋದರು. ಈ ಮಾತಾಡುಕ್ಕೆ ಕ್ಲಬ್ಬಿಗೆ ಯಾಕೆ ಬಂದರೋ ಕಾಣೆ! ರಸ್ತೆ ಅಂಚಿನಲ್ಲೇ, ಪೋಲೀಸಿನವನ ನೆರಳಲ್ಲೇ ಇದನ್ನು ಆಡಿದ್ದರೆ, ಅವನಾದರೂ ಇವರನ್ನ ಆಸ್ಪತ್ರೇಗೆ ಸೇರಿಸುತ್ತಾ ಇದ್ದ" ಎಂದ ಕೊರವ.

---




ಬಾಗಿಲ ಮೇಲೆ "ನಾಳೆ" : ಎಲ್ಲಾದಕ್ಕೂ 'ನಾಳೇನೆ' ಹಾಗಾದರೆ.
ಸಚಿವರ ಸದನವೇ ಇರಬೇಕು ? ಅಂದಮೇಲೆ__

# ಕೋಟಿ ಕ್ರಿಕೆಟ್ ಟೀಮು

ನಮ್ಮೂರು ಕೋಟಿ ಕ್ರಿಕೆಟ್ ಟೀಮಿಗೆ ನಾನೇ ಕ್ಯಾಪ್ಟನ್! ಕಟ್ಟಿಕೊಳ್ಳುವ ಹಾಗಿಲ್ಲ, ಬಿಡುವ ಹಾಗಿಲ್ಲ; ಏಕೆಂದರೆ, ಹೆಜ್ಜೆ ಹೆಜ್ಜೆಗೂ ಟಾಂಗ್ ಕೊಡುವವರೇ ಜಾಸ್ತಿ, ನಮ್ಮೂರಿನ ಹುಡುಗರ ಪೈಕಿ.

ಸರಿಯಾದ ಒಂದು ಟೀಮ್ ಸಿದ್ಧಪಡಿಸುವುದೇ ಗೋಳು, ನನಗೆ! ನಮ್ಮ ಬೀದಿಯಲ್ಲಿರುವ ಒಂಭತ್ತು ಮನೆಗಳಿಂದಲೂ, ಮನೆಗೊಬ್ಬನಂತೆ ಸೇರಿಸಿ ಕೊಳ್ಳಲೇ ಬೇಕು ಎಂದರೆ, ಅದು ಹೇಗೆ ಸಾಧ್ಯ? ಒಬ್ಬನಿಗೂ ನೆಟ್ಟಗೆ ನಿಂತು ಕೊಂಡು, ಬ್ಯಾಟ್ ಹಿಡಿಯುವುದಕ್ಕೆ ಬರದು; ಬೌಲ್ ಮಾಡಿರೋ ಎಂದರೆ, ತೆಗೆದು ಮೂತಿ ಮೇಲೆ ಎಸೆಯುತ್ತಾರೆ; ಫೀಲ್ಡ್ ಮಾಡಿರೋ ಎಂದರೆ, ಅವಲಕ್ಷಣದ ಕೈಗಳು, ಸಿಕ್ಕಿದ್ದನ್ನೆಲ್ಲ ಲಪಟಾಯಿಸುತ್ತಾರೆ, ಒಂದು ಕ್ಯಾಚ್ ಹಿಡಿಯುವುದಕ್ಕೆ ಬರುವುದಿಲ್ಲ. ಹಿಂದೆ, ಆಟಕ್ಕೆ ಅಂತ ಇಳಿದು, ಮಂಡಿ ತರಿದುಹೋಗಿದೆ. ಬೌಲ್ ಮಾಡಿಸಿಕೊಂಡು ಹಲ್ಲು ಕಿತ್ತುಹೋಗಿದೆ. ಕ್ಯಾಚ್ ಹಿಡಿಯುವುದಕ್ಕೆ ಹೋಗಿ, ಮಣ್ಣು ತಿಂದಿದೇನೆ ಅಂತ ನೆಪ ಹೇಳಿಕೊಂಡು, ಸೇರಿಸೋ ನನ್ನನ್ನೂ ಟೀಮಿಗೆ, ಇಲ್ಲದಿದ್ದರೆ, ಬಕ್ಕೆಗೆ ಹಾಕ್ತೀನೆ, ಬೀದಿಯಲ್ಲಿ ನಿನ್ನ ಮಾನ ಕಳೆಯುತ್ತೀನೆ, ಅಂತ ಹೆದರಿಸುತ್ತಾರೆ. ಹಳೇ ಹುಲಿ ಅಂತ ಒಬ್ಬನನ್ನ ಸೇರಿಸಲೇ ಬೇಕಂತೆ. ಬ್ರಾಡ್‌ಮನ್ ಚಿತ್ರಗಳನ್ನೆಲ್ಲ "ಆಲ್‌ಬಂ" ಜೋಡಿಸಿಕೊಂಡಿದಾನೆ ಅನ್ನುವುದರ ಮೇಲೆ ಒಬ್ಬನನ್ನ ತೆಗೆದುಕೊಳ್ಳಬೇಕಂತೆ, "ಹೌಸ್‌ದಾಟ್" ಅಂತ ಚೆನ್ನಾಗಿ ಕೂಗುತ್ತೀನೆ ನನಗೂ ಕೊಡೋ ಒಂದು ಚಾನ್ಸು, ಅಂತ ಇನ್ನೊಬ್ಬ! ಜೋಯಿಸ ಒಬ್ಬ ಇರಲೇಬೇಕು ಕಣೋ ಕಣಿ ಹೇಳುವುದಕ್ಕೆ ಅಂತ ಆ ಕೊನೆಯ ಮನೆ ಹುಡುಗ! ಪೇಟೆ ಕೋಟೆ ಅಂತ ಎರಡು ಟೀಮು ಬೇಡ. ಅಂಗೈಯಗಲದ ನಮ್ಮೂರಿಗೆ, ಎರಡನ್ನೂ ಒಂದು ಸೇರಿಸಿ, ಸೊಗಸಾದ ಟೀಮ್ ಕಟ್ಟೋಣ ಅಂತ ನಾನಂದ್ರೆ, ನನ್ನನ್ನ ಹೊಡೆಯುವುದಕ್ಕೇನೆ ಬಂದು ಬಿಟ್ಟರು, ಪುಣ್ಯಾತ್ಮರು. ನಮ್ಮ ಬೀದಿಯವರಷ್ಟು ಜನಕ್ಕೂ, ಊರಿಗೊಂದೇ ಟೀಮಾದರೆ, ಚಾನ್ಸೇ ದೊರೆಯುವುದಿಲ್ಲವಲ್ಲೋ ಅಂದ್ರು. ಹೀಗೆ ಎಲ್ಲರನ್ನೂ ಎತ್ತಿಹಾಕಿ ಕೊಂಡಿದ್ದರೂನೂ, ನನ್ನನ್ನೇ ಏಕೆ ಕ್ಯಾಪ್ಟನ್ ಮಾಡಿದಾರೆ ಅಂತೀರೋ, ಬ್ಯಾಟು, ಚೆಂಡು, ವಿಕೆಟ್—ಎಲ್ಲ ನನ್ನದು! ನಮ್ಮಪ್ಪ ಕೊಟ್ಟದ್ದು. ನನಗಲ್ಲದೆ ಅವುಗಳನ್ನು ಮುರಿಯಲು, ಒಡೆಯಲು ಬೇರೊಬ್ಬರಿಗೂ ಹಕ್ಕಿಲ್ಲ.

ಟೀಮ್ ನಿರ್ಧರ ಮಾಡುವುದಕ್ಕೇನೆ ಇಷ್ಟು ಮೀನ, ಮೇಷ, ಮಕರ, ವೃಶ್ಚಿಕಗಳಾದ ಮೇಲೆ, ನಾವು ಎಂದು ಆಡುವುದು, ಎಂದು ಗೆಲ್ಲುವುದು,

ಅಂತೀರೋ? ಅಯ್ಯೋ! ಅದನ್ನು ನೆನೆದುಕೊಂಡರೇನೆ, ನನಗೆ ತಲೆ ಸಿಡಿತ! ಅಂಪೈರಾಗಿ ನಿಲ್ಲಿಸಿದ ಇಸಮೇನೇ ಆಟಕ್ಕಿಳಿದುಬಿಡ್ತಾನೆ, ನಮ್ಮಲ್ಲಿ! ಕೊಡೋ ನನ್ನ ಕೈಗೆ ಬ್ಯಾಟು, ಕೊಡುತ್ತೀಯೋ ಇಲ್ಲವೋ ಅಂತ ಮಾರಾಮಾರಿ ಪ್ರಾರಂಭಿಸಿಬಿಡ್ತಾನೆ. ಅಂದ ಮೇಲೆ ನೋಡಿ, ಶಿಸ್ತು ಹೇಗಿರುತ್ತೆ? ಎಂಥೂಸಿಯಾಸಂ ಅಂತಾರಲ್ಲಾ, ಡಿಪೆಲ್ಲೋ, ಅದೆಲ್ಲಿಂದ ಬರುತ್ತದೆ? ಆಟದ ಬಯಲ ಅಂಚಿನಲ್ಲಿ ನಿಂತುಕೊಂಡು "ಓಡ್ರೋ, ಬೀರೋ, ಬಾರಿಸೋ, ಊಟಮಾಡಿಲ್ಲವೇನೋ" ಅಂತ ಟೀಕಿಸುತ್ತಾ ಇರುತ್ತಾರಲ್ಲಾ, ಪೇಟೆ ಹುಡುಗರು, ಇದ್ದಕ್ಕಿದ್ದಹಾಗೆ, ಅವರು ನುಗ್ಗಿಬಂದು, ಬ್ಯಾಟ್ ತೆಗೆದು, ಬೌಲರ್ ತಲೆಗೊಂದು ಬಾರಿಸಿಬಿಟ್ಟು, ಮತ್ತೆ ಪರಾರಿ ಪೇಟೆಗೋ ಕೋಟೆಗೋ! ಇಂಥ ಅವ್ಯವಸ್ಥೆ. ನಾವು ರನ್ ಹೊಡೆದರೆ, ಗುಡ್ಡೋ ಅಂತ ಕೂಗುವವನೊಬ್ಬನೂ ಇಲ್ಲ. ಕ್ಯಾಚ್ ಬಿಟ್ಟೆವು ಅನ್ನಿ, ಗ್ರಹಚಾರ ಬಿಡಿಸಿಬಿಡುತ್ತಾರೆ. ಬೇಕು ಅಂತ ಬಿಟ್ಟ; ಜಾತಿ ಅಂತ ಜಾರಿಸಿದ; ಸೋದರಮಾವನ ಮಗ ಅಂತ ಕೈಗೆ ಎಣ್ಣೆ ಸವರಿಕೊಂಡಿದ್ದ!... .... ನಮ್ಮೂರು ಜನಾನ ಮೆಚ್ಚಿಸುವುದು ಕಷ್ಟ. ಇಷ್ಟಕ್ಕೂ, ಒಬ್ಬ ಪ್ರೇಕ್ಷಕನೂ, ಒಂದು ಕಾಸು ತೆತ್ತಿಲ್ಲ. ಬಿಟ್ಟಿ ಷೋ!

ಟೀಮ್ ಕಟ್ಟುವುದಕ್ಕಿಂತ, ಅವರ ಕೈಲಿ ಆಟ ಆಡಿಸುವುದು ಮಹಾ ತಾಪತ್ರಯ, ಅಂದೆನಲ್ಲಾ, ಅದನ್ನ ಟೀಮಾಗಿ ಉಳಿಸುವುದು ಅದಕ್ಕಿಂತ ಫಜೀತಿ! ತಿಂಡಿ ತೀರ್ಥ ಹೆಚ್ಚು ಕಡಮೆ ಬಿತ್ತು ಅಂದ್ರೆ, ಎಲ್ಲರೂ ರಾಜೀನಾಮೆ ಹಿಡಿಯುವವರೇ! ಎಲ್ಲರಿಗೂ ಹೊಸ ಬ್ಯಾಟನ್ನೇ ಕೊಡಬೇಕು; ಸೊನ್ನೆ ಹೊಡೆದರೂ, ಸೆಂಚೂರಿಯಾನ್ ಅಂತ ಹೊಗಳುತ್ತಿರಬೇಕು. ಹಾಗಾದರೆ, ಯಾಕೆ ನಿಮ್ಮೂರಿಗೊಂದು ಕ್ರಿಕೆಟ್ ಟೀಮು ಅಂತ ಕೇಳುತ್ತೀರೇನು?....... ಯಾಕಿರಬಾರದು ಅಂತ ನಾನು ಅದಕ್ಕೆ ಸವಾಲು ಹಾಕ್ತೇನೆ. ಎಲ್ಲ ಊರಲ್ಲೂ ಹೀಗೇನೆ ........ಭಾರಿ ಕಾಮನ್‌ವೆಲ್ತಲ್ಲೂ ಒಳ ಮರ್ಮ ಹೀಗೆಯೇ ಇರಬಹುದು.

—ವೆಂಕಪ್ಪ.

———o———

## ಕೊರವೇಶ್ವರ ಶತಕ

(ತಸ್ಕರ ಪದ್ಧತಿ)

ಕೆಲವಂ ಬಲ್ಲವರಿಂದ ಕದ್ದು, ಕೆಲವ ಶಾಸ್ತ್ರಂಗಳಿಂದ ಕದಿಯುತಂ।
ಕೆಲವಂ ಮಾಳ್ಪವರಿಂದ ಬೆದಕಿ, ಕೆಲವಂ ಅಜ್ಞಾನದಿಂ ಬಿಡುತಂ॥
ಹಲವಂ ಆಂಗ್ಲಸಾಹಿತ್ಯದಿಂ ಮೆದಿಯಲ್ ಸಾಮಾನ್ಯನುಂ ಸರ್ವಜ್ಞನಪ್ಪಂ।
ಪಲವುಂ ಕಳ್ಳಸಾಹಿತ್ಯವೈ ಹರಹರಾ ಶ್ರೀ ನಮ್ಮ ಕೊರವೇಶ್ವರ॥

—ದಾಶರಥಿ ದೀಕ್ಷಿತ್.

# ಅವರು !

ನೀವು ಏನೇ ಹೇಳಿ, ನನಗಂತೂ, ಅವರ ಭಾಷಣ ಅಂದರೆ, ಕರ್ಣಾಮೃತ! ಎಂಥ ಸುರಿಮಳೆ, ಏನು ಥಾಟಿ, ಎಷ್ಟು ಗಂಟಲು, ಯಾವ ಗೇರು ಸೊಪ್ಪೆ! ಆಹಹ! ಭಗವಂತ ಗಂಟಲು ಎಂಬ ಪದಾರ್ಥ ಕೊಟ್ಟ ಮೇಲೆ ಅದನ್ನ ದಿನವೂ ಸಂಜೆ ಸಭೆಗಳಲ್ಲಿ ಬಾರಿಸಿ ನುಡಿಸದೆ ಇದ್ದರೆ, ಆತನಿಗೆ ದ್ರೋಹಮಾಡಿದಂತಲ್ಲವೆ, ಹೇಳಿ! ವಿಚಾರ ಮಾಡಬಲ್ಲವರು, ಮಾಡಲಿ! ಹೊಸ ಹೊಸ ಯೋಚನೆಗಳನ್ನು ತಲೆಗೆ ತುಂಬಿಕೊಂಡು, ಕೈಯಲ್ಲಿ ಮಾಡುವವರು ಮಾಡಲಿ! ನನಗೊಂದೂ ಬೇಕಿಲ್ಲ. ಅವರ ಅಪ್ರತಿಮ ಪ್ರಸಂಗ ಅದೊಂದೇ ಸಾಕು, ನನಗೆ. ಅದನ್ನೆಂದಿಗೂ ಅಧಿಕ ಪ್ರಸಂಗ ಎಂದು ನಾನು ಹಳಿಯುವುದಿಲ್ಲ. ನಮಗೆಲ್ಲ ದೇವರು ಉದ್ದುದ್ದ ಕಿವಿ ಕೊಟ್ಟಿರುವುದು, ಗುಂಡು ಗುಂಡು ಬುರುಡೆ ದಯಪಾಲಿಸಿರುವುದು ಏಕೆ? ಅವರ ಭಾಷಣ ಕೇಳಿ, ಅದನ್ನು ತುಂಬಿಕೊಳ್ಳುವುದಕ್ಕೆ ಆ ನಾದಲೋಕದಲ್ಲಿ, ಆ ಶಾರೀರ ಶೃಂಗಾರದಲ್ಲಿ, ಆ ವಾಕಿಸ್ತಾನದಲ್ಲಿ ನಲಿನಲಿದು ಅದಕ್ಕೆ ಮಾರ್ದನಿ ಕೊಡುವುದಕ್ಕೆ.

ಸತ್ಯ, ಅಹಿಂಸೆ ಎಂಬ ಎರಡು ಮಹಾ ವಾಕ್ಯಗಳನ್ನು ನೂರಾರು ಜನ ಉಚ್ಚರಿಸುತ್ತಾರೆ, ಸರಿ. ಆದರೆ, ಅವರು ಹೇಳುವಷ್ಟು ಗಂಭೀರವಾಗಿ, ಅಷ್ಟು ಎತ್ತರದ ಶ್ರುತಿಯಲ್ಲಿ, ಬೇರೊಬ್ಬ ಭಾಷಣಕಾರನೂ ಹೇಳಿದ್ದನ್ನು ನಾನು ಕೇಳಿಲ್ಲ. ಸತ್ಯ ಎಂಬ ಶಬ್ದ ಅವರ ಗಂಟಲಿಂದ ಹೊರಬರುವಾಗ, ಅದರ ನಾದ, ನಿದಾನ, ನಾಟಕೀಯತೆ, ನುಲಿದಾಟ, ಕಿವಿಗೆ ಇಂಪನ್ನೂ ತಂಪನ್ನೂ ಮಾಡುತ್ತದೆ. ಅದರಲ್ಲಿ ಗೀತೆಯ ಗುಡುಗಿದೆ; ಕಣ್ಫ್ಯೂಷಿಯಸ್ಸನ ಗದ್ದಲವಿದೆ; ಕ್ರೈಸ್ತನ ಶಿಲುಬೆ ಇದೆ; ಅರಬೀ ದೇಶದ ಮರಳುಗಾಡಿದೆ; ಹರಿಶ್ಚಂದ್ರನ ಸುಡುಗಾಡಿನ ಕಾವಿದೆ. ಅವರು ಅದನ್ನು ಹೇಳುವಾಗ, ಅವರ ಕಣ್ಣು ಕಲ್ಯಾಣಿಯ ಕಡೆ ಹೊರಳುತ್ತದೆ; ಮೈ ಸಾವೇರಿರುತ್ತದೆ. ಗಂಟೆಗೆ ಅರವತ್ತು ಸಲವಾದರೂ ಅವರು 'ಸತ್ಯ' ಎಂದು ಹೇಳದಿರಲಾರರು. ಸಲಸಲಕ್ಕೂ, ಅದರಲ್ಲಿ ಹೊಸ ಹೊಸ ಅರ್ಥ ತುಂಬಿ ತಾನ ಮಾನ ಬದಲಾಯಿಸಿ, ಪ್ರಯೋಗಮಾಡುತ್ತಾರೆ ಅಸತ್ಯಕ್ಕೇ ತಮ್ಮ ವಾಣಿಯ ಕುಲುಮೆಯಲ್ಲಿ ಕಾಯಿಸಿ, ಸತ್ಯದ ಮೆರುಗು ಕೊಡುವ ಮಾಟ ಅವರ ನಾಲಿಗೆಗಿದೆ.

'ಅಹಿಂಸೆ' ಎಂಬುದಕ್ಕೂ ಹಾಗೆಯೇ. ಆ ಮಾತನ್ನು ಹಿಂಸಿಸಿ, ಅದರ ಕತ್ತು ಕಿವುಚಿ, ಅದನ್ನು ಹಿಂಡಿ ದಂಡಿಸುವವರು ಬಹಳ. ಆದರೆ, ಅವರು ನನ್ನ ಅಚ್ಚುಮೆಚ್ಚಿನ ಅವರು, ಆ ಮಾತನ್ನು ಉಚ್ಚಾರಣೆ ಮಾಡುವಾಗ, ಅವರ

ಮೇಲೆ ನಮಗಿದ್ದ ಹಿಂಸಾ ಬುದ್ಧಿಯೆಲ್ಲ ಮಾಯವಾಗುವುದು. ಅಹಿಂಸೆಯನ್ನು ತೋಡಿ ತೋಡಿ ಶಂಕರಾಭರಣವನ್ನಾಗಿ ಮಾರ್ಪಡಿಸುವ ಮಂತ್ರಶಕ್ತಿ ಅವರದು. ಅಹಿಂಸೆ, ಅಹಿಂಸೆ, ಅಹಿಂಸೆ ಎಂದು ಅವರು ಮೂರು ಭಾರಿ ದೃಷ್ಟಿ ತೇಲಿಸುತ್ತ, ಗಂಟಲು ನಡುಗಿಸುತ್ತ, ನಿಟ್ಟುಸಿರು ಬಿಡುತ್ತಾ, ನುರಿತ ನಟನಂತೆ, ಹೇಳಿದರೆ ಸಾಕು, ಎಂಥ ಅಮ್ಮ್ರಾಸೆ ವ್ಯಾಪಾರಿಗಳನ್ನೂ, ಲಂಚಕೋರರನ್ನೂ, ನಾವು ಮನ್ನಿಸಿ ಗೌರವಿಸಿಬಿಡುತ್ತೇವೆ.

ಅವರು ಜನ್ಮ ತಾಳಿರುವುದೇ ಜನಜಂಗುಳಿಯನ್ನು ಜಮಾಯಿಸಿ, ಅವರ ಜಾನುವಾರುತನವನ್ನು ಜಯಿಸಿ, ಅವರ ಕಿವಿಗಳನ್ನು ಸಾರ್ಥಕಪಡಿಸುವುದಕ್ಕಾಗಿ ಮಾತಿನ ಮಲ್ಲರಲ್ಲ ಅವರು. ಮಾತಿನ ಬೆಲ್ಲರು. ಅವರ ನಾಲಿಗೆ ನೀಳವಾಗಿರಲಿ, ಸದಾ!

ರೇವಣ್ಣ.—

---




—ಇದೇನೋ ಮುಖವಾಡ!

—ದೊಡ್ಡ ಚುನಾವಣೆಗೆ ನಿಂತಿದ್ದೇನೆ—ಅದಕ್ಕೆ ಮುಂಜಾಗ್ರತೆ ಕಣೋ!

# ಮೀನಾಕ್ಷಿಯ ಮುಯ್ಯಿ

"ಸಾರು ಖಾರ" ಎಂದೆ ಮೂಗಿನಲ್ಲಿಳಿಯುತ್ತಿದ್ದ ನೀರು ಒರಸಿಕೊಳ್ಳುತ್ತ. ಮೀನಾಕ್ಷಿಗೆ ನಾಹೇಳಿದ್ದು ಕೇಳಿಸಿದ್ದರಲ್ಲಿ ಸಂಶಯವಿಲ್ಲ. ಏಕೆಂದರೆ, ಸೌಟಿನಿಂದ ತಟ್ಟೆಗೆ ಸಾರು ಸುರಿಯುತ್ತಿರುವಾಗಲೇ ನಾನು ಹಾಗೆ ಹೇಳಿದ್ದು. ಆದರೂ ತುಪ್ಪದ ಮಿಳ್ಳೆ ಎತ್ತಲಿಲ್ಲ—ಸೊಂಟದ ಮೇಲೆ ಕೈಯಿಟ್ಟು ಗೋಡೆಗೆ ಒರಗಿ ನಿಂತಳು. ಯಥಾ ವಿಧಿಯಾಗಿ ಕೆಂಗಣ್ಣು ಬೀರಿ "ಖಾರಾಂದದ್ದು ಕೇಳಲಿಲ್ಲವೆ?" ಎಂದು ಗುಟುರು ಹಾಕಿದೆ. ಮತ್ತೆ ಮೂಗು ಸುರ್ ಎಂದು ಮೇಲೆಳೆದುಕೊಂಡು, ಆ ತುಂಬು ರೆಪ್ಪೆಯನ್ನು ಆಳವಾಗಿ ಮುಚ್ಚಿ, ಗೀರು ಹುಬ್ಬು ಮೇಲೇರಿಸಿ ಹೊಳೆಯುವ ಮೂಗುಬೊಟ್ಟನ್ನು ಥಳಕ್ ಎನ್ನಿಸಲೋ ಎಂಬಂತೆ ಅವಳೂ ಸುರ್ ಎಂದು ಮೂಗು ಎಳೆದು ಎರಡು ತುಟಿಗಳನ್ನೂ ಅದುಮಿ "ಪುಸ್ಯ, ನಿಮ್ಮ ಮುಖಕ್ಕೆ ಮಂಗಳಾರತಿ" ಎಂದೆನ್ನುವ ಭಾವ ಆ ಮುಖದಿಂದ ಹೊರಹೊಮ್ಮಿಸಿದಳು. ನನಗೆ ಸಹನೆ ಮೀರಿತು—ಹಸಿದ ಹಾರವ ಕೇಳಬೇಕೆ? ಕೈ ಹಿಡಿದ ಕೃಶಾಂಗಿಗೆ ಈ ಕೊಬ್ಬೆ? ಎಂಬ ಸಿಟ್ಟು ಸಿಡಿದುಬಂತು· "ಹೇಳಿದ್ದು ಕೇಳಿತೇ?" ಎಂದು ಪರಶಿವನ ಫಾಲನೇತ್ರದಂತೆ ದಿಟ್ಟಿಸಿದೆ.

ಆ ಸಾಮಿ ಬಳುಕಿ ತೆಳುವಾದ ಬೆರಳುಗಳಿಂದ (ಎಡಗೈಯಿಂದ) ಅರ್ಧ ಮಿಳ್ಳೆ ತುಪ್ಪ ನನ್ನ ಎಲೆಗೆ ಹಾಕಿತು. "ಬಹಳ ಖಾರ........ಮೆಣಸಿನ ಪುಡಿಯ ಜೊತೆಗೆ ತುಪ್ಪವೂ ದಂಡ.... ...ನಿಮ್ಮಪ್ಪನ ಮನೆಯಲ್ಲ ಇದು........" ಎಂದು ಗದರಿಸಿದೆ.

"ನಮ್ಮಪ್ಪನ ಮನೆ ಗಂಟೂ ಬರುತ್ತೆ" ಎಂದು ಒಂದೇ ಬಾರಿಗೆ ಗುಂಡು ಹಾರಿಸಿದಂತೆ ಹೇಳಿದಳು. ತುಪ್ಪದ ಪಾತ್ರೆ ಕುಕ್ಕುತ್ತ.

'ಎಲಾ ಇವಳ! ಎಷ್ಟು ಧೈರ್ಯ........ಇಷ್ಟು ದಿನದವರೆಗೆ ಏನು ವಿನಯ! ಏನು ಮರ್ಯಾದೆ! ಏನು ನಯ! ಏನು ನಾಜೂಕು! ಇದೇನು ಬಂತು ಇವಳಿಗೆ' ಎಂದು ನನಗೆ ಆಶ್ಚರ್ಯವಾಯಿತು. ಇನ್ನು ಸದರ ತೋರಿಸಿದರೆ, ಕೋಳಿ ಕುಕ್ಕನನ್ನಾಗಿ (Hen pecked) ಮಾಡಿಬಿಡುವಳೆಂದು ನೀರು ಕುಡಿದ ಲೋಟಾ ನಾನೂ ಕುಕ್ಕುತ್ತ "ಸಾಕು—ಬಾಯ್‌ಮುಚ್ಚು" ಎಂದು ಅಂದುಬಿಟ್ಟೆ. ಕಣ್ಣು ಮುಚ್ಚಿಕೊಂಡು ಸರಸರನೆ ಸಾರು ಅನ್ನ ಸುರಿದುಕೊಂಡೆ.

ತಲೆ ತಗ್ಗಿಸಿ ಖಾಲಿಯಾದ ತಾಟನ್ನು ಗೀರಿ ಗೀರಿ ನೆಕ್ಕುತ್ತಾ ಯೋಚಿಸಿದೆ. ಪಾಪ ಅಬಲೆ ತಂದೆ ತಾಯಿ ಬಂಧು ಬಳಗ ಬಿಟ್ಟು ನನ್ನ ಕೈ ಹಿಡಿದು ಈ

ಕೊಂಪೆ ಕೊಳ್ಳಿಗಾಲಕ್ಕೆ ಬಂದಿದ್ದಾಳೆ. ಬೆಳದಿಂಗಳು ಹೂವು ಬಳ್ಳಿ ಹಾಲು ಜೇನುಗಳ ಕನಸು ಕಟ್ಟಿ ಬಂದ ಹುಡುಗಿ ಕಡು ಪಾಪವನ್ನೆ ಮಾಡಿ ಕಾಡುಪಾಪದ ಕೈ ಹಿಡಿದೆ ಎಂದು ಕೊರಗುವುದಿಲ್ಲವೆ ? ಎಂದು ಚಿಂತಿಸಿದೆ. ಅವಳನ್ನು ನೋಡಲು ಧೈರ್ಯ ಬರಲಿಲ್ಲ. ಸಿಟ್ಟಿನಲ್ಲಿ ಅಂದದ್ದು ತಪ್ಪೆಂದು ಮರುಗಿದೆ. ಕಣ್ಣುತುಂಬ ನೀರು ತಂದು ಸೆರಗಿನ ಕೊನೆಯಂಚಿನಿಂದ ಆ ಮಾನಿನಂಥ ಕಣ್ಣುಗಳನ್ನು ಒರಸಿಕೊಳ್ಳುತ್ತಿರಬಹುದೆಂದು ನಿಧಾನವಾಗಿ ತಲೆ ಎತ್ತಿ ನೋಡಿದೆ.

ಹಿಡಿದ ಪಟ್ಟು ಹಾಗೇ ಇತ್ತು—ಕಣ್ಣಲ್ಲಿ ನೀರಿಲ್ಲ. ಅದೇ ಕೊಬ್ಬಿದ ನೋಟ ಬೇಪಾರ್ಸಿಯನ್ನು ದಿಟ್ಟಿಸುವ ದೃಷ್ಟಿ "ಅನ್ನ" ಎಂದು ಆಜ್ಞಾಪಿಸುವ ವಾಣಿಯಲ್ಲಿ ಉಸುರಿದಳು. ನಾನು ಯೋಚಿಸಿದ್ದೆಲ್ಲಾ ತಲೆಕೆಳಗು ಎಂದು ಗೊತ್ತಿದ್ದದ್ದು ನಾನು "ಇನ್ನೊಂದು ತುತ್ತು" ಎಂದಾಗ "ನಾನೂ ಊಟ ಮಾಡೋಳೂನ್ನೋದು ನೆನಪಿಲ್ಲಾಂತ ಕಾಣುತ್ತೆ" ಎಂದು ವಾಪಸ್ಸು ಅನ್ನದ ತಪ್ಪಲೆ ಇಟ್ಟೇಬಿಟ್ಟಳು. ರ್ರೊಂಯ್ ಎಂದು ತಾಟು ಬಿಸಾಕಿ ಧಬಧಬನೆ ಹೇರಿಬಿಡಲೆ ಎಂದು ಎನಿಸಿತು. ಇವಳಿಗೇನು ಬಂತು ಧಾಡೀ ನಿನ್ನೆತನಕ ನನ್ನ ಕಂಡರೆ ಬೆದರುಗೊಂಬೆ ನೋಡಿದಹಾಗೆ ಆಡುತ್ತಿದ್ದವಳು ಈಗ ನನ್ನ ಲಕ್ಷವೇ ಇಲ್ಲದೆ ಮಾತು ಉಚಾಯಿಸುತ್ತಿದ್ದಾಳೆ ? ಏನೋ ಇರಬೇಕೆಂದು ಸಿಟ್ಟನ್ನು ಹೊಟ್ಟೆಯಲ್ಲೇ ಹುದುಗಿಸಿ,

"ಯಾಕೆ ಮೈಲಿ ಸ್ವಸ್ಥವಿಲ್ಲವೆ?" ಎಂದು ಕೊಂಕು ಮಾತಲ್ಲಿ ವಿಚಾರಿಸಿದೆ.

"ಯಾರಿಗೆ—ಕೇಳೋರಿಗೆ ?" ಎಂದುಬಿಟ್ಟಳು, ಮಜ್ಜಿಗೆ ಸುರಿಯುತ್ತ.

ನನ್ನ ಸಹನೆಯ ಎಲ್ಲೆ ಸಂಪೂರ್ಣವಾಗಿ ಮೀರಿಹೋಯಿತು. ಕೂಡಲೆ ಎದ್ದು ಕೈ ಮೇಲೆ ನೀರು ಹಾಕಿಕೊಂಡು ಆರಾಮು ಕುರ್ಚಿಯಲ್ಲಿ ಸಿಡಿಮಿಡಿಯ ಮುಖ ಹಾಕಿ ಕುಳಿತೆ. ಅರ್ಥವೇ ಆಗಲಿಲ್ಲ ಅರ್ಧಾಂಗಿಯ ಚರ್ಯೆಗೆ ಕಾರಣ. ಕೈ ತಾನಾಗೇ ತಲೆಯಮೇಲೆ ಆಡಿಸಿತು. ಇದೇನು ಬಂತು ಇವಳಿಗೆ ! ಚಲುವಾದ ಸಂಸಾರ ಹುಳಿ ಹಿಂಡಲು ಏಕೆ ಹೀಗೆ ಕುಕ್ಕುತ್ತಿರುವಳು. ಏನೋ ಕಾರಣ ಎಂದು ಚಿಂತಿಸತೊಡಗಿದೆ. ಅವಳೂ ಸೆರಗಿನಿಂದ ತೊಳೆದ ಕೈ ಒರಸಿಕೊಳ್ಳುತ್ತಾ ನನ್ನ ಬಳಿಯ ಕುರ್ಚಿಯಲ್ಲಿ ಕುಕ್ಕರಿಸಿದಳು. ಎಲೆ ಅಡಿಕೆ ಮೆಯ್ಯುತ್ತಿದ್ದಾಳೆ ಮಡಿಸೋಕೆ ಕೂಡಲಿಲ್ಲ? ರೇಗಿಹೋಯ್ತು.

"ಹುಡುಗಾಟ ಹುಡುಗಾಟ—ಸಾಕು ಸಾಕು ಬಹಳ ಚೆನ್ನಾಗಿದೆ—ಎಲೆ ಅಡಿಕೆ ತಾ................" ಎಂದು ರೇಗಿ ಹೇಳಿದೆ.

"ನೀವೆ ಏಕೆ ಹಾಕ್ಕೊಬಾರದು ?"

" ನಾನು ಗಂಡ—ನಿನ್ನ ಯಜಮಾನರು........"

" ಇನ್ನು ಈ ನಿಮ್ಮ ಗಂಡು ಜಾತಿಯು ದಬ್ಬಾಳಿಕೆ ನಡೆಯುದು ತಿಳೀತೆ ?"

" ಏನು ದಬ್ಬಾಳಿಕೆನೇ...........ಪತಿದೇವೋಭವ—ಗೊತ್ತಿಲ್ಲವೆ ತರುಣಿಗೆ ಪತಿದ್ಯೆವಂ ಸೀತೆ–ಸಾವಿತ್ರಿ–ಆದರ್ಶ ಸತೀರತ್ನಗಳು "

" ಈ ಸತೀ ರತ್ನಗಳ ಕಥೆ ಬರದದ್ದೂ ಗಂಡು ಜಾತಿ ಕವಿಯೇ "

" ಇವತ್ಯಾಕೆ ಹೀಗೆ ಮಾತಾಡ್ತಿದ್ದೀಯೆ ಶಾರೂರಿಗೆ ಹೋಗಬೇಕೆ ?– ಏನು ಸಮಾಚಾರ "

" ಸಮಾಚಾರವೇನು—ಇನ್ನು ನಮ್ಮ ಜಾತಿಗೆ ಸ್ವಾತಂತ್ರ್ಯ ಬಂದು ಬಿಡುತ್ತೆ ಅದನ್ನ ಅನುಭವಿಸೋಕೆ ತರಪೇತಾಗತಾ ಇದ್ದೀನಿ "

" ಏನೆ ಹಾಗಂದ್ರೆ—"

" ನಿಮ್ಮ ಜೋರು—ನಿಮ್ಮ ಕೂಗಾಟ ನಿಮ್ಮ ದಾಸಿಯರ ಹಾಗೆ ಮಾಡಿ ಕೊಂಡ ಹೆಂಡ್ತೀರ ನೋಡೋ ನೋಟ ಎಲ್ಲಾ ಕಟ್ಟಡಬೇಕು "

"........ನೀನು ಮಲಕ್ಕೊ ಹೋಗು—ಇದು ನನ್ನ ಗ್ರಹಚಾರ—ನಿನ್ನ ಮೈಲಿ ಸುತ್ರಾಂ ಹುಷಾರಿಲ್ಲ........ಇದು ಖಂಡಿತ"

" ನನಗ್ಯಾಕೆ ನಿಮ್ಮ ಜಾತಿಗೆ ಮೊದಲಿಂದಲೂ ನೆತ್ತಿಯಲ್ಲಿ ಪಿತ್ತವೇ ಅಡಗಿದೆ........ತುಳಿದುಬಿಟ್ಟಿದ್ದೀರಿ ಹೆಣ್ಣು ಜಾತೀನ........"

ನನಗೆ ಕೊಂಚ ಗಾಬರಿಯೇ ಆಯಿತು. ಇದೇನು ಬಂತು ಇದ್ದಕ್ಕಿದ್ದ ಹಾಗೆ ಇಡೀ ಗಂಡು ಜಾತೀನ್ನೇ ತರಾಟೆಗೆ ತಗೊಂಡಿದ್ದಾಳೆ. ಮಾಡಿದ ತಪ್ಪು ಅವಳದ್ದು ಸಾರು ಖಾರ ಅಂದದ್ದು ತಪ್ಪೆ? ತಾತ್ಸಾರವಾಗಿ ಮೂದಲಿಸಿದ್ದಲ್ಲದೆ ತಪ್ಪು ತನ್ನದಾದರೂ ನಮ್ಮ ಜಾತಿಗೇ ಯುದ್ಧಾಪತದ್ವಾ ಅನ್ನುತ್ತಿದ್ದಾಳಲ್ಲಾ! ಇದಕ್ಕೆ ಕಾರಣ ಹುಡುಕಿ ದಾರಿಗೆ ತರಬೇಕಾದ್ದು ತಾಳಿ ಕಟ್ಟಿದವನ ಕರ್ತವ್ಯ ಎಂದು,

"ಕುಲಕರ್ಣಿ ಹೆಂಡ್ತಿ ಯಥಾ ಪ್ರಕಾರ ಆಸ್ಪತ್ರೆಗೆ ಬಂದಿದ್ದಳು—ಮೈ ಕೈ ಎಲ್ಲಾ ನೋವಂತೆ" ಎಂದು ಬೆದರಿಸಿದೆ.

" ಸರಿ ಆ ಪುಣ್ಯಾತ್ಗಿತ್ತಿಗೆ ಗೊತ್ತಿಲ್ಲ—ಪಾಪ ದಿನ ಬೆಳಗಾದರೆ ಮೈ ಮುರಿಯೋ ಹಾಗೆ ಗಂಡನ ಹತ್ತಿರ ಏಟು ತಿನ್ನುತ್ತೆ ಆ ಹೆಣ್ಣು ಜೀವ—ಸಂಜೆ ಹೋಗಿ ಅವಳಿಗೆ ತನ್ನ ಹಕ್ಕು ಹೇಳಿ ಬರಬೇಕು "

"ನೀನು ಏನು ಹೇಳೋದು—ನಿನ್ನ ತಾರಾಬಲಕ್ಕೆ ಕೈ ಮುಗಿ—ನಾನು ನಿನ್ನ ಎಲುವು ಮುರೀದೆ ಬಿಟ್ಟಿದ್ದೀನಲ್ಲಾ ಇವತ್ತಿನ ಚರ್ಯೆಗೆ!........ಹೀಗೇ ರೇಗ್ಸಿ ನಾನೂ ಕುಲಕರ್ಣಿ ಹಾಗೇ........"

"ಅದೆಲ್ಲಾ ಕಟ್ಟಿಡಬೇಕು........ಮುಯ್ಯಿಗೆ ಮುಯ್ಯಿ........" ಎಂದು ಅವಳು ಅನ್ನುತ್ತಿದ್ದ ಹಾಗೇ ಒಂದು ಜವಾನಿ ಬಂದು ನನ್ನಾಕೆಗೆ ಸಲಾಮು ಹೊಡೆದು ಒಂದು ಚೀಟಿ ಮುಂದೆ ಹಿಡಿಯಿತು. ಅವಳು ರವಿಕೆ ಕತ್ತುಪಟ್ಟಿಯಿಂದ ನನ್ನ ಪಾರ್ಕರ್ ಪೆನ್ನು ಟಿಕ್ ಎಂದು ತೆಗೆದು ಸಹಿ ಹಾಕಿ "ಆಗಲೀಂತ ಹೇಳು" ಎಂದು ಆ ಜವಾನಿಯನ್ನು ಕಳುಹಿಸಿದಳು. ನಾನು "ಇದ್ಯಾರೆ—ಇದೇನೆ—ನಿನ್ನ ಹೊಸ ಹುದ್ದೆ" ಎಂದೆ.

"ನೀವೊಬ್ಬರೆ ಸೆಕ್ರೆಟ್ರೀಂತ ಸೀಟಿ ಹೊಡಿತ್ತಿದ್ದಿರಲ್ಲಾ ನಾನೂ ಸೆಕ್ರೆಟ್ರಿ ಸಮಾಜಕ್ಕೆ ನಿನ್ನೆ ಸಂಜೆಯಿಂದ" ಎಂದು ಹುಬ್ಬು ಹಾರಿಸಿದಳು—ಮೂಗು ಕೆರೆದಳು—ಕಾಲು ಮೇಲೆ ಕಾಲು ಹಾಕಿಕೊಂಡು ಕೈಲಿದ್ದ ಪೇಪರಿಂದ ಗಾಳಿ ಹಾಕಿಕೊಂಡಳು. ಸಣ್ಣಗೆ ಗಂಡಸರ ಹಾಗೆ ಸೀಟಿ ಹೊಡೆದಳು. ಅವಳ ಜಂಭ, ಒರಟು ಉತ್ತರ, ಎದುರು ಬಿದ್ದದ್ದು, ಎಲ್ಲಾ ಕೊಂಚ ಕೊಂಚವಾಗಿ ಅರ್ಥವಾಯಿತು.

"ಸೆಕ್ರೆಟ್ರಿ ಆದರೆ ಸಮಾಜದಲ್ಲಿ, ಇಲ್ಲಿ ನನ್ನ ಅರ್ಧಾಂಗೀನೇ—ನಾನು ಹೇಳಿದ ಹಾಗೆ ಕೇಳೋ ತಾಳಿ ಕಟ್ಟಿಸಿಕೊಂಡ ತಾಟಕಿ ಅಲ್ಲ ಹೆಂಡ್ತಿ ತಿಳೀತೇ ........ಅದೆಲ್ಲಾ ಚೆಲ್ಲಂ ಚೆಲ್ಲು, ಕಟ್ಟಿಡು" ಎಂದು ಮತ್ತೆ ಧ್ವನಿ ಏರಿಸಿದೆ.

"ಕಟ್ಟೋದೂ ಇಲ್ಲ, ಇಡೋದೂ ಇಲ್ಲ ತಿಳೀತೇಂದ್ರೆ—ಅರ್ಧಾಂಗೀರು ಅರ್ಧ ಮಾತ್ರ ಇನ್ನು ಕೆಲಸ. ಅರ್ಧಾಂಗರಾದ ತಾವು ಉಳಿದ ಅರ್ಧಕ್ಕೆ ತಲೆ ಕೊಡಬೇಕಾದ್ದು ನ್ಯಾಯ ತಾನೆ? ನೀವೇ ಹೇಳಿ ಲೆಖ್ಖಾಚಾರಕ್ಕೇನು?"

"ಇದೇನೆ ನಿಂದು ಹೊಸ ಅರ್ಥ—ಪತಿದೇವೋಭವ........ಮರೆತೇನೆ........ ದುಡಿಯೋ ಗಂಡ್ಸು—ನೀನು ನನ್ನ ಸೇವೆ ಮಾಡಿದರೆ ಸ್ವರ್ಗ ಪುಣ್ಯ—ಪುರಾಣದಲ್ಲಿ ಕೇಳಿಲ್ಲವೇ?........"

"ಅದೆಲ್ಲಾ ಪುರಾಣ ಇಲ್ಲಿ—ಸಾಕು ಸುಮ್ನಿರೀಂದ್ರೆ—ನೀವು ಗಂಡು ಜಾತಿಯೋರು ಹೆಂಗ್ಸರನ್ನ ಮನೆ ಕೆಲಸದೋರೂಂತ ತಿಳಿದ ಕಾಲ ಹೋಯ್ತು ತಿಳೀತೇ........ಕೋಡ್ ಬಿಲ್ಲು ಇವತ್ತೋ ನಾಳೇನೋ ಪಾಸಾಗೋದು ಖಂಡಿತ —ನಮ್ಮಪ್ಪನ ಮನೆಯಿಂದ ನನ್ನ ಪಾಲಿನ ಆಸ್ತಿ, ನನ್ನ ಭಾಗದ ಮನೆ,

ಜಮಿಾನು ಬಂದು ಸೇರುತ್ತೆ—'ನೀವೂ ಕುಲಕರ್ಣಿ ಹಾಗೆ ಹೆಂಡ್ತಿನ್ನ ಹೊಡಿತೀ ನೀಂತ ಬೆದರಿಸಿದಿರೊ ಡೈವೋರ್ಸ್‌ಗೆ ಅದೇ ಕಾರಣ ಸಾಕು—ಇನ್ನು ನಿಮ್ಮ ದೌಲತ್ತು ಲೇ—ಹೇ—ಬಾ—ಹೋಗು—ನಿಂತ್ಕೊ—ಹಲ್ಗಿರಿ, ಹೂಮುಡ್ಕೊ— ಅಂತ ಸತಾಯಿಸೊ ಕಾಲ ನಿಮ್ಮ ಹಳೇಕಾಲದ ಗಂಡುಗಳ ಬಿಲ್‌ಗೇ ಆಯ್ತು ........ತಿಳೀತೇ........" ಎಂದು ಆರ್ಭಟಿಸಿದಳು. ನಾನು ಸುಸ್ತು.

ನಮ್ಮಪ್ಪ ನಮ್ಮಮ್ಮನನ್ನೂ, ನಮ್ಮಜ್ಜ ಅಜ್ಜಿಯನ್ನೂ, ಅವರ ಅಜ್ಜ ಅವರ ಅಜ್ಜಿಯನ್ನೂ, ನೋಡಿಕೊಂಡ ಹಾಗೇ ನಾನೂ ನನ್ನ ಮಿಾನಾಕ್ಷಿನ್ನ ನೋಡಿ ಕೊಂಡಿದ್ದೆ, ಹಾಗೇ ಸಾಕಿದ್ದೆ. ಅದೇ ರಕ್ತ ಅಲ್ಲವೆ?........ಈಗ ನಮ್ಮ ಕಾಲಕ್ಕೆ ಹಿಂದೂ ಕೋಡು ಬಿಲ್ಲು ಬಂದು ಅವಳಿಗೆ ಕೋಡು ಮೂಡಿಸಿದ್ದು, ನನಗೆ ಏಕ್‌ದಂ ಹೇಗೆ ಒಗ್ಗಬೇಕು? ನನಗೆ ಯೋಚನೆಗಿಟ್ಟುಕೊಂಡಿತು. ಏತನ್ಮಧ್ಯೆ ಕಾರಲ್ಲಿ ಬಂದ ಧಡೂತಿ ಹೆಣ್ಣೊಂದು ಮಿಾನಾಕ್ಷಿನ್ನ ಕ್ಲಬ್ಬಿಗೆ ಕರೆಯಿತು. ಇವಳು ಮೂಗು ಕೆರೆದು "ಚೀರೀಯೋ" ಎಂದು ಹೊರಟೇ ಬಿಟ್ಟಳು. ಅಬ್ಬಾ ಎಂಥಾ ಮುಯ್ಯಿ ಈ ಹೆಣ್ಣು ಜಾತೀದ್ದು ಎಂದು ಚೀರಿದೆ.

ಹಾಗೇ ಯೋಚಿಸಿದೆ. ದುಃಖ ಉಕ್ಕೇರಿ ಬಂತು. ಇನ್ನು ನಮ್ಮ ಆಟ ನಡೆಯದೇ ಎಂದು ಇಡೀ ಗಂಡು ಜಾತಿಗಾಗಿ ಕಣ್ಣೀರಿಟ್ಟೆ. ಹೊಟ್ಟೆ ತಾಳ ಹೊಡೆಯುತ್ತಿತ್ತು. "ಲೇ ಉಪ್ಪಿಟ್ಟು ಅವರೇ ಕಾಯ್ದು" ಎಂದೆನ್ನಲು ಅವಳಿಲ್ಲ —ಏನೂ ತೋಚದೆ ಊದುಗೊಳವೆ ಹುಡುಕಿ ಒಲೆ ಹೊತ್ತಿಸಲು ಯೋಚಿಸಿ, ತಲೆಗೆ ನೀರು ಪಂಚೆ ಬಿಗಿದು ಅಡಿಗೆ ಮನೆ ಹೊಕ್ಕೆ. ಮತ್ತೇನೂ ಮಾರ್ಗವೇ ಇರಲಿಲ್ಲ.

ಮಾಡೂಕೆ ಬರಬೇಕಲ್ಲಾ—ಸುಸ್ತು ಸಂಕಟ. ಸೊರಗಿ ಒರಗಿದ್ದೆ, ಮತ್ತೆ ಕುರ್ಚಿ ಮೇಲೆ ತಲೆಗೆ ಸುತ್ತಿದ ನೀರು ಪಂಚೆ ಒದ್ದೆಮಾಡಿ ಹೊಟ್ಟೆ ಮೇಲೆ ಹಾಕಿ ಕೊಂಡು ಕಣ್ಣು ತಾನಾಗೇ ಮುಚ್ಚಿಕೊಂಡಿತು.

*　　　*　　　*

ತಣ್ಣಗೆ ಗಾಳಿ ಬೀಸಿದಂತಾಯಿತು. ಘಮ್ ಎಂದು ಪಾಂಡ್ಸ್ ಪೌಡರ್ ವಾಸನೆ ಹೊಡೆಯಿತು. ಮಿಾನಾಕ್ಷಿ ಬೀಸಣಿಗೆ ಹಿಡಿದು ನಿಂತಿದ್ದಳು ನಗುತ್ತ. ಪಕ್ಕದ ಮೇಜಿನ ಮೇಲೆ ಘಮ ಘಮಿಸುವ ಅವರೆಕಾಯಿ ಉಪ್ಪಿಟ್ಟಿನ ತಾಟು, ಲೋಟದಲ್ಲಿ ಪಾವು ಕಾಫಿ. ಮರುಮಾತಾಡದೆ ಮೇಯಿದು ಮುಗಿಸಿದೆ. ನಾನೇನೂ ಮಾತಾಡಲಿಕ್ಕೇ ಹೋಗಲಿಲ್ಲ. ಯಾಕೆ ಬೇಕು ಒಂದಾಡಿದರೆ

ಹೆಚ್ಚು, ಒಂದಾಡಿದರೆ ಕಡಿಮೆ, ತೆಪ್ಪಗೆ ಕುಳಿತೆ ಸೋತ ಬೇಸ್ತಿನ ಮುಖಮಾಡಿ ಕೊಂಡು.

ಅವಳೇ ಅಂದಳು—'ಇನ್ನು ಮುಂದೆ ನಿಮ್ಮಾಟಗಳು—ನಿಮ್ಮ ರೇಗುಗಳು ಹೇಗೆ ನಡೆಯೊಲ್ಲಾನ್ನೋಕೆ ಬೆಳಿಗ್ಗೆ ತೋರಿಸಿದ್ದು ಸ್ಯಾಂಪಲ್ ತಿಳೀತೇ" ಎಂದು.

"ಹೌದು" ಎಂದು ನಾನಂದುಬಿಡುವೆ. ಆದರೆ, ಹಾಗಂದರೆ ಹೇಗೋ ........ಯಾರು ಬಲ್ಲರು? ನನಗೇಕೆ ಎಂದು ಅಡ್ಡಗೋಡೆ ಮೇಲಿನ ಬೆಕ್ಕಿನ ನಗುವಿನ ಹಾಗೆ—"ಹ್ಹಿ ಹ್ಹಿ ಹ್ಹಿ ಹ್ಹಿ ಹ್ಹಿ" ಎಂದು ನೀರು ಕುಡಿದು ಹಲ್ಲು ಗಿಂಜಿದೆ. ಅವಳೂ ನಕ್ಕಳು ಸಧ್ಯ. ನನ್ನ ಪುಣ್ಯ.

|| ಹರಿ ಓಂ ಸುಸ್ತು ||

—ದಾಶರಥಿ ದೀಕ್ಷಿತ್.

---




ಬೋರ್ಡ್ ಕಾಣಸೋದಿಲ್ಲಾ? ಇಲ್ಲಿ ಗಾಡಿ ನಿಲ್ಲಿಸ್ತೀಯಾ!

—ಓ! ವಯ್ಯಾ! ಆ ಬೋರ್ಡಾಗೆ ಏನ್ ಬರೆದಿದೆ, ಓದಿ ಹೇಳಯ್ಯಾ!

—ಅರೆ! ನನ್ನೇ ಕೇಳ್ತೀಯಾ! ನಂಗೂ ಅದನ್ನ ಓದುಕ್ಕೆ ಬರಾಕಿಲ್ವಲ್ಲಾ!

# ಇಂದಿನ ಗಾದೆಗಳು

---

ಸಂಕಟ ಬಂದಾಗ! ಸರ್ದಾರ್ ಪಟೇಲ.

ಬೆಲ್ಲ ಇಲ್ಲ, ಇಲ್ಲಾ! ತಿಂದವನೇ ಬಲ್ಲ.

ತೋಳ, ಕುರಿ ಕಾಯುತ್ತೀಯಾ? ಅಂದ್ರೆ, ಆಗಲೇ ಮುಗಿಸಿಬಿಟ್ಟೆ ಅಂತಂತೆ.

ಮಂತ್ರಕ್ಕೆ ಮಂತ್ರಿ ಪದವಿ ಉದುರಿತು.

ಮಂದಿ ಕೇಳಿ, ಮಂತ್ರಿ ಆರಿಸುತ್ತಾರೆಯೆ?

ಅದೇ ಉಂಡೇನು, ಈ ಪೊದ್ದೇ ಉಂಡೇನು, ಇಕ್ಕಡನೇ ಉಂಡೇನು.

ಮೂರ್ತಿ ಚಿಕ್ಕದಾದರೂ, ಪೂರ್ತಿ ಕೆಟ್ಟಿಲ್ಲ.

ಮಾಡಿದವರ ಪಾಪ, ಆಡದೆ ಇದ್ದವರ ಬಾಯಲ್ಲಿ.

ಮಾಡುವುದು ಅನಾಚಾರವಾದರೆ, ಮನೆ ಮುಂದೆಯೇ ಬೃಂದಾವನ.

ಬೊಗಳುವ ನಾಯಿಗೆ ಭಂಗಾರದ ಸರಪಣಿ, ಕಚ್ಚುವ ನಾಯಿಗೆ ಕಾರಾಗೃಹವಾಸ

ಚೂರು ಒಗ್ಗಟ್ಟಿಲ್ಲ; ಮೂರು ಒಬ್ಬಟ್ಟು ಬೇಕಂತೆ.

ಒಂದಲ್ಲ ಒಂದು, ನಾಡಿಗೆ, ಸುವೆಲ್ಲ ಬೇನೆ.

ಗಾಡಿ ಎತ್ತಿಗೆ ಜ್ವರ ಬಂತು ಅಂತ ಎಮ್ಮೇನ್ನೂ ಎಳೆದು ಕಟ್ಟಿದರು.

ಆಪತ್ತಿನಲ್ಲಿ ಅಪ್ಪಣೆ ಬೇರೇನೆ! ಹೊರಡಿಸಿದ್ದೇ ಹುಕುಂ.

ಎದ್ದೆಯಾ ಜಿ. ಜಿ. ಅಂದರೆ, ಕಡಾಸಿ ಕಂಕುಳೊಳಗೆ ಅಂದನಂತೆ.

——(೦)——







ಅಯ್ಯೋ ಪಾಪ!
ಯಾರ್ದೂ? ಅವರ್ದೇ!
ಅಪ್ಪಂದೋ ಅಣ್ಣಂದೋ
ಹಳೇದೋ ಹರಕೋ
ಕೊರಳ್ಮುಚ್ಚಿದ ಅಂಗಿ
ನಾಕ್‌ನಾಕ್ ಗುಂಡಿ
ಹಾಸನ್ ಟೋಪಿ
ಮುಂಡಿಮೇಲ್ ಚೆಡ್ಡಿ
ಅದಲು ಬದಲು ಚಪ್ಪಲಿ
ಹೈಸ್ಕೂಲು ಹೈದ
ಬಾಯಲ್ಲಿ ಬೆರಳಿಟ್ಟರೆ
ಕಚ್ಚೋಕ್‌ಬರೋಲ್ಲ
ನಗತಾ ನಗತಾ!
ಕಾಲ ಕಳೆವ!

ಅದ್ದೂ! ರಾಜಾ!
ಯಾರ್ದೋ! ಏನೋ!
ಅಪ್ಪಂದೋ! ಮಾವಂದೋ!
ಸಾಲಾನೋ! ಸೋಲಾನೊ!
ಬಿರಕೊಂಡ್ ಬಿದ್‌ಕೋಟು
ಗುಂಡಿ ಗೈರ್‌ಹಾಜರ್!
ಮುಂಡೆ ಹೇಗೂ ಖಾಲಿ
ಜರಿ ಸರಿಗೆ ಪಂಚೆ
ಮಣಭಾರ ಚಪ್ಪಲಿ
ಮುಂಡಿಯುದ್ದ ಷರಟು
ಕಾಲೇಜಿನ್ನೂ ಕಾಣ
ಬೆರಳು ಕೊಟ್ಟರೆ
ಕೈಕಚ್ತಾನೆ!
ಘಾಟಿ ಅಂದ್ರೆ ಘಾಟಿ!

ತಕ್ಕೊ ಸಪ್ಲೈ!
ಯಾರ್ದೋ! ಏಕೋ!
ಬಡಖಾಯಿ ಬೋರೇಗೌಡ
ಗಿಳಿಹಸಿರು ಬಟ್ಟೆ
ಶಾಕ್‌ರೀಕ್ ಷರಟು
ತಲೆಗೊಂದು ಹ್ಯಾಟು
ಗರಿಗರಿ ಷರಾಯಿ
ಯಮಭಾರ ಬೂಡ್ಸು
ನಡುಗೊಂದು ಬೆಲ್ಟು
ವಿಶ್ವವಿದ್ಯಾಲಯ
ಲೆಫ್ಟ್‌ರೈಟ್! ಲೆಫ್ಟ್‌ರೈಟ್!
ಸಿಗರೆಟ್ ಅಂದ್ರೆ
ಕಡ್ಡಿ ಕೇಳ್ತಾನೆ!
ಹೋಷಿಯಾರ್!



ಓಹೊ ಹ್ಯಾಟು !
ಕಾಲರ್ ನೆಕ್‌ಟೈ !
ಷರಟು ಷರಾಯಿ !
ಚಪ್ಪಲಿ ಚೀಲ !
ಸರಿ–ಗೊತ್ತಾಯ್ತು !
ಜೀವನ ಸಂಗ್ರಾಮ
ವಿಮಾ ವಾಣಿಜ್ಯ
ಕಂಡದ್ದಕ್ಕೆ ಕೈ
ತಲೇದು ಕಾಲಿಗೆ
ಕಾಲಿಂದು ತಲೇಗೆ
ದಿನಕ್ಕೊಂದು ಕಸಬು
ತಲೆಯೆಲ್ಲಾ ಯೋಜನೆ
ಅನ್ನಕ್ಕೆ ಮಾತ್ರ ಯೋಚನೆ
ಬುದ್ಧಿಯೋ ! ಭಗವಂತ !



ಮೈಸೂರು ರುಮಾಲು
ಕಾಲರ್ ನೆಕ್‌ಟೈ
ಕೋಟು ಬೂಟು
ಇಸ್ತ್ರಿ ಷರಾಯಿ
ಚತ್ರಿ ಚೀಲ
ಬರೀ ಡೌಲು
ಹುಟ್ಟಿಸಿದ ದೇವರು
ಹುಲ್ಲು ಮೇಯಿಸ್ತಾನೆ
ಅವರದು ಇವರಿಗೆ
ಇವರದು ಅವರಿಗೆ
ಕೈಗಂಟಿದ್ದು ತನಗೆ
ತಾರೀಪು ಗಿಲೀಟು
ತಲೆ ಸವರೋ ಮಾತು
ಬಟ್ಟೇನೇ ಭಗವಂತ !



ಟೋಪೀನೇ ಟೋಪಿ
ನೆಹರೂ ಬನೀನು
ಉಲನ್ ವೇಸ್ಟು
ಕಚ್ಚೆ ಪಂಚೆ
ಕಂಕಳು ಚೀಲ
ಸತ್ಯ ಅಹಿಂಸೆ
ನಮ್ಮದೇ ತ್ಯಾಗ
ಪುರಾಣ ಹೇಳೋಕೆ
ಬದನೆ ತಿನ್ನೋಕೆ
ಗಾಳಿಗೆ ತೂರಿಕೊ
ಬಿಸಲಿಗೆ ಒಣಗಿಕೊ
ಕದರ್ ಇರೋವರೆಗೂ
ಯಾತಕ್ಕೂ ಭಯವಿಲ್ಲ
— ಜೀಕೆ ಜೈ !

# ಸಾಪಿ! ಷಹರಿಗೆ ಬಂದರೂ

ಮುನ್ಸಾಮಿ ಎಲ್ಲಪ್ಪ ಅಂದರೆ, ಗಾಂಧೀ ಚಿತ್ರದ ಕೆಳಗೆ ಕಣೋ! ಅನ್ನೋ ಅಷ್ಟು ಗಾಂಧಿ ಭಕ್ತ ನಮ್ಮ ಮುನಿಸಾಮಿ. ಆ ಗ್ರಾಮಕ್ಕೆ ಅವನೇ ನುರಿತ ನಾಯಕ. ಅವನು ಬೆಳೆದ ಜೋಳಕ್ಕೆ ಬಹುಮಾನ ಬಂದಿತ್ತು. ಅವನು ನೇಯ್ದ ಪಂಚೆಗೆ ಚಿನ್ನದ ಬಟ್ಟಲು ಬಹುಮಾನ ಬಂದಿತ್ತು. ಸಮಾಜ ಸೇವೆಗೇ ಅಂತ ಅವನಿಗೇ ಬಹುಮಾನ ಬಂದಿತ್ತು.

ಅಂದ ಮೇಲೆ ಯಾವ ಚುನಾವಣೆಯಾಗಲೀ, ಯಾವ ಕಾಂಗ್ರೆಸ್ ಸಂಸ್ಥೆ ಯಾಗಲಿ ಅವನನ್ನು ಹಿಡಿದು ತಮಗೆ ಓಟನ್ನು ಪಡೆದುಕೊಳ್ಳಬೇಕಾಗಿತ್ತು. ಬಂದವರೆಲ್ಲರೂ ಇವನ ಬೆನ್ನು ತಟ್ಟಿಯೇ ಕಾರ್ಯದಲ್ಲಿ ಯಶಸ್ವಿಗಳಾಗ ಬೇಕಾಗಿತ್ತು.

ಹಲವಾರು ವರ್ಷ ಇವನ ಬೆನ್ನು ತಟ್ಟಿ, ಇವನ ಮನೆಯ ಸದರದ ಆತಿಥ್ಯ ಪಡೆದವರೆಲ್ಲರೂ ನೀನೂ ಬೆಂಗಳೂರಿಗೆ ಬಾರಯ್ಯ ಈ ಗ್ರಾಮದಲ್ಲೇ ನಿನ್ನ ಜೀವನ ಮುಗಿಸಿದ್ದಿ, ಷಹರನ್ನು ಒಂದು ಸಾರಿ ನೋಡು ಎಂದರು.

ಮುನಿಸಾಮಿಗೆ ಒಂದು ಚಪಲ, ಒಮ್ಮೆ ಹೋಗೋಣ ಅಂತ. ಅವನ ಹೆಂಡತಿಗೆ ಬಲು ಆಶೆ, ಷಹರಿನಲ್ಲಿ ಒಂದು ಸೀರೆಯಾದರೂ ಕೊಂಡು ತರೋಣ ಅಂತ.

ಗ್ರಾಮೋದ್ಧಾರಕರ ಸಭೆ ಬೆಂಗಳೂರಿನಲ್ಲಿ ಏರ್ಪಟ್ಟಾಗ ಆಳಧಿಕಾರಿಗಳ ಆಹ್ವಾನದ ಮೇಲೆ ಮುನಿಸಾಮಿ ಷಹರಿಗೆ ಬಂದ. ಮೂರು ದಿನ ಅಲ್ಲಿ ಇಲ್ಲಿ ಸುತ್ತಿ, ಅದನ್ನ ಇದನ್ನ ನೋಡಿ, ಅವರನ್ನ ಇವರನ್ನ ಕಂಡು ಅವರ ಆತಿಥ್ಯ ಪಡೆದು ಷಹರಿನ ಜೀವನ ಬಲು ಸೊಗಸು. ಬಲು ಹಿತ. ಹಳ್ಳಿಯಲ್ಲಿ ಏನಿದೆ, ದುಡಿಯುವುದೇ ಎಂದು ಕೊಂಡ.

ಹೇಗೂ ಚಾಣಕ್ಯ—ಮೆಲ್ಲಗೆ ಎಲ್ಲಿ ಬೀಸಬೇಕೋ ಅಲ್ಲಿ ಗಾಳ ಬೀಸಿ, ಒಂದು ಕೆಲಸವನ್ನು ಗಿಟ್ಟಿಸಿದ. ಗ್ರಾಮ ಕಾಯಕಲ್ಪಕ್ಕಾಗಿ ಒಂದು ಕೇಂದ್ರ ಕಛೇರಿ. ಅಲ್ಲಿ ಇವನು ಸಲಹೆಗಾರ. ಹೀಗೆ ಹೊಸ ಏರ್ಪಾಡಾಯಿತು.

ಮುನಿಸಾಮಿ ಹಳ್ಳಿಗೆ ಹೋಗಿ ಅಲ್ಲೆಲ್ಲಾ ಬಂದೋಬಸ್ತುಮಾಡಿ ಷಹರಿನ ವಾಸಕ್ಕೆ ಹಿಂತಿರುಗಿದ. ತನ್ನ ಕಛೇರಿಯ ಮೆಟ್ಟಲನ್ನು ಹತ್ತಿದ. ತನ್ನ ಕಛೇರಿಯ ಅಧ್ಯಕ್ಷರಾದ ಸಚಿವ ಮಧ್ಯಮರನ್ನು ಭೇಟಿಯಾದ. ಮುಂದಿನ ಕಾರ್ಯಕ್ರಮದ ವೇಳಾಪಟ್ಟಿ, ಅಂದಾಜು ಹಾಕಲು.

ಸಚಿವ ಮಧ್ಯಮರಂದರು "ಮುನಿಸ್ವಾಮಿ, ಈ ಇಲಾಖೆ ಉದ್ಧಾರವಾಗ ಬೇಕಾದರೆ, ಇದರಿಂದ ದೇಶಕ್ಕೆ ಹಿತವಾಗಬೇಕಾದರೆ, ನೀನೇ ಗತಿ. ನೀನೇ

ಕಾರಣ. ನೀನೇ ನಿಮಿತ್ತ. ಅಂದಮೇಲೆ ಇಲ್ಲೊಂದು ಪ್ರಯೋಗ ಶಾಲೆ ಏರ್ಪಡಿಸೋಣ. ಯಾವ ಯಾವ ತಿಂಗಳು, ಹೇಗೆ ಹೇಗೆ, ಯಾವ ಯಾವ ಬೆಳೆ ಬೆಳೆಯಬೇಕು, ಅದೆಲ್ಲವನ್ನೂ ನಿದರ್ಶನಕ್ಕೆ ಎಂಬಂತೆ ಈ ಮಣ್ಣಿನ ಕುಂಡಗಳಲ್ಲಿ ನೀನು ಬೆಳೆಸು. ವಿರಾಮ ಕಾಲದಲ್ಲಿ ಹೇಗೆ ನೂತು ಸಂಪಾದನೆ ಹೆಚ್ಚು ಮಾಡಬಹುದು, ಅದಕ್ಕೂ ನಿದರ್ಶನ ಮಾಡಿ ತೋರಿಸು. ಇತ್ಯಾದಿ ಇತ್ಯಾದಿ."

ಮುನಿಸಾಮಿಗೆ ಈಗ ದೇವರು, ಜಾತಕಗಳಲ್ಲಿ ನಂಬಿಕೆ ಹೆಚ್ಚಾಗಿದೆ. 'ನಾನು ಹಳ್ಳಿಯಲ್ಲಿರಲಿ, ದಿಳ್ಳಿಗೆ ಬರಲಿ, ಗಿಡ ಬೆಳೆಸೋದು, ನೂಲು ನೂತೋದು ಇದೇ ನನ್ನ ಹಣೆ ಬರಹ ಹಳ್ಳಿಯಲ್ಲಾದರೆ ಹೆಚ್ಚಾಗಿ ಸ್ವತಂತ್ರವಾಗಿ ಮಾಡುತ್ತಿದ್ದೆ. ಅಧಿಕಾರ ವ್ಯಾಮೋಹದಿಂದ ದಿಳ್ಳಿಗೆ ಬಂದು, ಇಲ್ಲೂ ಅದೇ ಕೆಲಸ ಮಾಡುತ್ತಿದ್ದೇನೆ, ಇನ್ನೊಬ್ಬರ ಕಟು ವಿಮರ್ಶೆಗೆ ಗುರಿಯಾಗಿ', ಅಂತ ಅಂದುಕೊಳ್ಳುತ್ತಿದ್ದಾನೆ.

ಮೊನ್ನೆ ರಾಜೀನಾಮೆ ಕೊಟ್ಟ ಅಂತ ಕೇಳಿದೆ. ಸಚಿವ ಮಹಾಶಯರು ಇಂತಹ ಒಳ್ಳೆಯ ಕೆಲಸಗಾರ ಇನ್ನು ಸಿಗುವನೇ, ಇವನು ಹೋದರೆ ಇಲಾಖೆಯ ಗತಿ?' ಎಂದು ಗೊಣಗುತ್ತಿದ್ದರಂತೆ. — ಮು. ಸ್ವಾಮಿ ಭಾವಮೈದ.

---




ಇದೇನೋ! ಕಾರ್ ಏನಾಯ್ತೋ?

—'ಕಾರ್' ಮನೆಗೆ ಕಳಿಸಿದೆ. ಡಾಕ್ಟರು ಹೇಳಿದರು ಔಷಧಿ ಕುಲಕಿ ತೆಗೊ ಅಂತ. ಅದಕ್ಕೇ ಜಟ್ಕಾದಲ್ಲಿ ಹೋಗ್ತಿದೇನೆ.

# ಇನ್ನು ಮುಂದಿನ ಸಮಸ್ಯೆ

(ಹಿಂದೂ ಕೋಡ್ ಬಿಲ್ ಬದುಕಿದ ಮೇಲೆ)

---

ನನಗವನು ಬಲು ಆಪ್ತ ಮಿತ್ರ
ಆಕೆ ನನ್ನ ಮಿತ್ರನ ಪುತ್ರಿ
ಎಷ್ಟು ಅಂದದ ಜೋಡಿ ಅಂತೀರಿ !
ಅಷ್ಟು ಚಂದದ ವರಸಾಮ್ಯ.

ಇವರು ಒಬ್ಬರಿಗೊಬ್ಬರು
ಊರಿಗೋಲಾಗುವ, ಒಂದಾಗುವ ದಿನ.
ಉಡುಗೆರೆ ಕೊಡದೆ ಉಂಟೆ.
ಅದರ ನೆನಪಳಿಯ ಗೊಡುವುದೇ !

ಆರ್ಧತ್ತು ಅಂಗಡಿಗಳ ಸುತ್ತಿದೆ.
ಎಂಟ್ಹತ್ತು ವಸ್ತುಗಳ ನೋಡಿದೆ.
ಕಡೆಗೊಂದು ಕಣ್ಣಿಗಿಂಪಾದ
ಅರವತ್ತು ರೂಪಾಯಿನ ಜೋಡಿಶಾಲ
ಸಾಲ ತಂದೆ. ಅವರಿಗಿತ್ತೆ ಆ ದಿನ.

ಎರಡು **ವರುಷ**ಗಳಾದುವು.

ಹಳೆಯ ಕಾಗದಗಳನ್ನೆಲ್ಲಾ ಹುಡುಕುತಿದ್ದೆ
ಮರೆತ ಹಣದ ಕಾಗದಗಳು ಸಿಗುವುವೊ ಎಂದು
ಆಗ ಸಿಕ್ಕಿತು ಜೋಡಿ ಶಾಲಿನ 'ಬಿಲ್ಲು'
ಆರೆಂಟು ನೆನಪು ಪತ್ರಗಳ ತೆಕ್ಕೆಯಲ್ಲಿ

ಆಗಲೇ ಅವರುಗಳ ನೆನಪು—
ಅಯ್ಯೋ ! ಎನ್ನಿಸಿತು.        ಅವರಾಗಲೇ
ಬೇರೆಬೇರೆಯಾಗಿ        ಎರಡು ತಿಂಗಳಾಗಿತ್ತು
ಈಗ ಆ 'ಬಿಲ್ಲ'        ಪೂರ್ತಿಗೊಳಿಸಬಹುದೇ ?

—ಅನಂತ ಪದ್ಮನಾಭಶಯನ ಶರ್ಮ.

---

# ನಕ್ಕಳಾ ತಾಯಿ

---

ನಕ್ಕಳಾ ತಾಯಿ ಕಾವೇರಿ
ಗುಳುಗುಳಿಸಿ ಗರಿಗೆದರಿ ನಕ್ಕಳಾ ನೀರಿನಾ ನೀರೆ....
ಘಕ್ಕನೇ ನಕ್ಕಳವಳ್ ನಾಸಿಕದ ಲೋಹದಲಿ ಮುಗುಳಾಗಿ
ಕೊರಕಲಾ ನೊರಜುಗಳುರುಳಿದವು ಇಲ್ಲಿ; ಯಜಮಾನಿ
ಮೀನುಗಳ ‘ಏನಡಿಗೆ’ ಕೇಳಿಸಿತು ಇಲ್ಲೆ, ಈ ನಗುವಿನಲಿ

ಘೊಕ್ಕನೇ ಮೂಟೆಯೊಡೆದಂತೆ; ಸರಸರನೆ, ತೂತಿನಿಂ
ಸಾಲಾಗಿ ನಣ್ಣಕ್ಕಿ ಹರಿದು ಸುರಿದಂತೆ,
ಕಿಲಜಿಲನೆ ಹೊಳೆಯುತ್ತ ತರುಣಿಯರ ಅಚ್ಚಹೊಸ
ಬೈಗುಳದ ಹಾಗೆ; ಎವೆನವಿರ, ‘ಸ್ಟಾರು’ಗಳು ಕಿತ್ತಾಗ
ಮಿಡಿದ ಚುರುಕು–ಚಿಮುಟದ ಹಾಗೆ–ನವಿರ್ನೋವ ನಗುವೀಗ.
ಈಗಲೋ
ಉಂಡೆಗಳ ಮುಕ್ಕಿ, ನುಂಗುವಾ ಮೊದಮೊದಲೆ
ಹಾಸದಾ ಹೊನಲುಕ್ಕಿ, ತುಟಿಯೊಡೆದು, ಎದೆ ಮಿಕ್ಕಿ,
ಕಣ್ಣುಗಳು ಎದ್ದೆದ್ದು ಹೊರಬರಲು, ಉಂಡೆ–ರಸ–ಭಾವಗಳು
ಎಲ್ಲವೂ ಸಿಡಿವಂತೆ, ಹೊಳ್ಳೆಗಳು ಬಿರಿದು;—ಸೀರ್ಪನಿಯ
ಪ್ರೋಕ್ಷಣದಿ ಎಚ್ಚೆತ್ತು ಪ್ರೋಕ್ಷಕರು ಮೈಯೊರಸೆ ಶಪಿಸುತ್ತ.
ನಕ್ಕಳಾ ತಾಯಿ....

ಈಗ ರಾಮುವಿನಂತೆ ಗರ್ಗರಿಸಿ, ಗುಳುಗುಳನೆ ತಂಪಾಗಿ
ಆಗಲೇ ಶಂಕರನ ಸೀಳುನಗೆ, ನಾಟಕದ ಪೊಳ್ಳುನಗೆ
ಬಜ್ಜಿಯೊಲಂ ಬೊಜ್ಜುನಗೆ,
ಹಪ್ಪಳವ ಮುಷ್ಟಿಯಲಿ ಮಡಿಸಿಡುವ ಜರ್ಜರಿತ ಗರಮು.......
ಚಿನುಕುರುಳಿ.

ಬಿಗಿಹಣ್ಣು ಕಿತ್ತಳೆಯ ಸುಲಿವಾಗ
ಕಣ್ಣಿಗೇರುವ ತಂಪಿನಾ ಪನ್ನೀರ ಕಿರಿಕಿರಿಯು,
ಬಿಗ್ಬೆನ್ನು ನಕ್ಕಂತೆ ಒಳಕಂಠದೊಳನಗೆಯು,
ಎಳನೀರದನಿಗಳಾರೇಳು ಕರಟದಲಿ ಎಲ್ಲೆಲ್ಲೊ ನಕ್ಕಂತೆ,

ರೇಡಿಯೋ ಮಕ್ಕಳಿಗೆ ಕಾರ್ಯಕ್ರಮ ಏತ್ತಂತೆ....
ನಮ್ಮಾ ರಾಮಚಂದ್ರನು
ನೆನನೆನಸಿ ನಿನ್ನಿನಾ ಜೋಕುಗಳ—
'ಚಿತ್ರದಾ ಕಡುಮೌನದಲಿ ಗುಡುಗುಡುಗಿ ಅಡಗಡಗಿ
ಏಕೇಕೊ ನಕ್ಕಂತೆ....

ಹೀಗೆಲ್ಲ ನಕ್ಕಳಾತಾಯಿ ಕಾವೇರಿ,
ಬಿಕ್ಕಿದಳು, 'ಚಕೆ'ಗಳ ಪೆಕ್ಕಿ ಸಜಯದಲಿ
ಹುಸಿನಕ್ಕಳು, 'ಒಸಿ' ನಕ್ಕಳು, ಅಸಿ ನಕ್ಕಳು ;
ತಮಿಳಿನಲಿ, ಫ್ರೆಂಚಿನಲಿ, ಎದೆಬಿಚ್ಚಿ, ಮುದಮುಚ್ಚಿ
ನಕ್ಕುಕೊಂಡಳು ತಾಯಿ.
ನಿಂತಿತು ನಗು.

ಕೂಗೊಂದ ಜೀವನದಿಯಾಳದಲೆ ನುಡಿಯಿಸಿತು.
ತೀರದಾ ಸೀರೆತವಕಗಳ ಮರುಭೂಮಿ ಮನಸಿನಾ ಬಿರುಗಾಳಿಸುಯ್ಯಲೋ,
ವೃದ್ಧಾಪ್ಯದಲಿ ಜೀರ್ಣ ಬಲು ಕೆಟ್ಟಿರುವ ರೇಡಿಯೋ ಮೊರೆತಗಳೊ
ಎಂಬಂತೆ.
ಚೀತ್ಕಾರ.

ಒಮ್ಮೆ, ಕಡೆಯೊಮ್ಮೆ ನಕ್ಕಳಾ ತಾಯಿ, ಮರುಕಳಿಸಿ
ಫಕ್ಕನೇ ನಕ್ಕಳಾ ಕಾವೇರಿ ನಲ್ಲಿಯಲಿ,
ನಾಸಿಕದ ಲೋಹ ಮಿರುಗೆ.

ಮೊಸಳೆಗಳ ಕನಿಕರದ ಕಣ್ಣೀರೊ
ವೈದ್ಯರಾಣತಿಯಿತ್ತ ಆರೇಳ ತೊಟ್ಟುಗಳೊ,—
ಚಿತ್ರಮಯ ನಗು ನಿಂತು, ಕೇಳಿಸಿತು ಊಳಿಟ್ಟ ಕಾವೇರಿ—
ಬಂದುದಾರೇ ತೊಟ್ಟು, ಎಣಿಸಿದೆವು ಬಿಡದೆ.

—ಅಕ್ರೂರ.

—o—

"ಲೋಕಾಸ್ಸಮಸ್ತಾತ್ ಸುಖಿನೋಭವಂತು"

# ನಮ್ಮ ಮಾನೀಟರ್

ಕೊರವಂಜಿ ಸಂಪಾದಕರಿಗೆ !

ಬಾಲಕನ ನಮಸ್ಕಾರಗಳು. ಅದಾಗಿ ಉಭಯ ಕುಶಲೋಪರ ಸಂಪ್ರತಿಗಳು.

ಈ ಕಾಗದ ಬರೆಯುವ ಕಾರಣ ಏನೆಂದರೆ, ಸ್ವಾಮಿಾ, ಈ ಸುದ್ದಿಯನ್ನು ಬೇರೆ ಬೇರೆ ದೈನ್ಯಂದಿನ ಪತ್ರಿಕೆಗಳಿಗೆ ಕಳಿಸಿದ್ದೆ. ಯಾರೂ 'ಪ್ರಿಂಟ್‌ಮಾಡಲಿಲ್ಲ. ನೀವಾದರೂ ಮಾಡುತ್ತೀರೇನೋ ಎಂಬ ಭಯದಿಂದ ದಯಮಾಡಿ ಕಳಿಸಿದ್ದೇನೆ. ನೀವು ಕಂಡಿತ ಪ್ರಿಂಟ್‌ಮಾಡಬೇಕು. ನಮ್ಮ ಸಾಲೆಯಲ್ಲಿರುವ ಇನ್ನೂರಕ್ಕೂ ಹೆಚ್ಚು ಹುಡುಗಳು, ಹಾಗೂ ಮಾಸ್ಟರುಗಳು ನಿಮ್ಮ ಪತ್ರಿಕೆಯನ್ನು ಈಗಲಾದರೂ ಓದುತ್ತಾರೆ.

ನಮ್ಮ ತರಗತಿಯಲ್ಲಿ ಮೊನ್ನೆ "ಮಾನೀಟರ್" ಚಿತಾವಣೆ ನಡೆಯಿತು. ನಮ್ಮ ಮಾಸ್ತರು ಬಂದು ಬಾಲಕರೇ, ನಿಮ್ಮ ಮಾನೀಟರನ್ನು ನೀವೇ ಚುನಾಯಿಸ್ರಿ ಎಂದರು. ತಾವು ಆದರಲ್ಲಿ ಭಾಗ ಮಾಡುವುದಿಲ್ಲವೆಂತ ಅವರು ನಮಗೆ ರಜಾ ಕೊಟ್ಟು ಹೊರಟೇ ಹೋದರು. ನಾವು ಚಿತಾವಣಿಗೆ ಪ್ರಾರಂಭಿಸಿದೆವು.

ಪಟೇಲ್ ರಾಮೇಗೌಡನ ಮಗ ಹೇಳಿದ, ನಾನೇ ಮಾನೀಟರ್ ಆಗಬೇಕು, ಇಲ್ಲದೆ ಇದ್ದರೆ, ಚೆಂಡಾಟಕ್ಕೆ ಚಕೋತನ ಕಾಯನ್ನು ಇನ್ನುಮೇಲೆ ಕೊಡೋದಿಲ್ಲ ಎಂದ.

ಗ್ರಾಮಭೋಗ ಸೋಮಯ್ಯನ ಸೋದರಳಿಯ ಶಿವಣ್ಣ ಹೇಳಿದ, ನಾನೇ ಮಾನೀಟರ್ ಆಗಬೇಕು ಇಲ್ಲದೆ ಇದ್ದರೆ ಪಟದ ಹಬ್ಬ ಬಂದಾಗ ನಿಮ್ಮ ಪಟಗಳಿಗೆ ಸೂತ್ರ ಹಾಕಿಸಿ ಕೊಡುವುದಿಲ್ಲ ಎಂದು ಹಠ ಹಿಡಿದ.

ದಫೇದಾರ್‌ನ ತಂಗಿ ಮಗ ದಾನಪ್ಪ ನನ್ನೇ ಮಾನೀಟರ್ ಮಾಡಿ, ಇಲ್ಲದೆ ಇದ್ದರೆ ಪೋಲೀಸಿನವರಿಗೆ ಹೇಳಿ ನಿಮ್ಮನ್ನು ಹೊಡಿಸುತ್ತೇನೆ ಎಂದು ಜೋರು ಮಾಡಿದ.

ಅನಂತಾಚಾರಿ ಆಗ ಕೂಗಿದ, ನನ್ನನ್ನು ಮಾನೀಟರ್ ಮಾಡದೇ ಇದ್ದರೆ, ನಾನು ಈ ಸಾರ್ತಿ ಕೊಟ್ವಾರೋತ್ಸವದಲ್ಲಿ ನಿಮಗೆಲ್ಲಾ ಪುಳಿಯೋರೆ ಹಂಚುವಾಗ ಮೋಸ ಮಾಡ್ತೀನಿ, ಹುಷಾರ್ ಎಂತ ನಾಮ ಹಾರಿಸಿದ.

ಆಗ ನಮ್ಮ ಪಾಪಯ್ಯ ಹೇಳಿದ. ಯಾರು ಬೇಕಾದರೂ ಮಾನೀಟರ್ ಆಗಲಿ, ನಾನು ಮಾತ್ರ ಸೀಬೇಕಾಯಿ ನಮ್ಮ ತೋಟದಿಂದ ಕಿತ್ತು ತರೋಕೇ ಇಲ್ಲ ಅಂತ.

ಅಂಬಿ ಆಗ ಒಂದು ಬಾಣ ಬಿಟ್ಟ. ಎನ್ನ ಮಾನೀಟರ್ ಮಾಡಿದರೆ, ನಂಬ ಹೋಟಲಿಂದ ಓಂಪುಡಿ ಚಕ್ಕಲಿ ತಿರಡಿ ತರ್ತೇನೆ. ಇಲ್ಲಾದೇ ಇದ್ದರೆ —ಇಲ್ಲೇ ಎಂದ.

ಸ್ವಾಮಿಾ ! ಈ ಜಗಳವಾಗುತ್ತಿದ್ದಾಗಲೇ ನಮ್ಮ ಪುಟ್ಟುಮಾದು ಹೇಳಿದ್ದು. "ಬಿಡ್ರೋ! ಲೋ, ಇವರ್‍ಯಾರೂ ಬೇಡ, ನಮ್ಮ ಮರೀನ ಮಾನೀಟರ್ ಮಾಡೋಣ, ಅವನು ಯಾರು ಹ್ಯಾಗೆ ಹೇಳಿದರೆ ಹಾಗೆ ಕೇಳ್ತಾನೆ ಅಂತ.

ಎಲ್ಲರೂ ಒಪ್ಪ ಆದರು. ಈಗ ನಾನು ಮಾನೀಟರ್ ಆಗಿದ್ದೇನೆ. ಎಲ್ಲರೂ ಹೇಳಿದ್ದೆಲ್ಲಾ ಕೇಳಿ, ಎಲ್ಲರಿಗೆ ಸೀಮೆಸುಣ್ಣ ಹಂಚಿ, ಎಲ್ಲರ ಹತ್ತಿರಲೂ ಒಳ್ಳೆಯವ ಎಂತ ಅನ್ನಿಸಿಕೊಂಡಿದ್ದೇನೆ. ಮಾಸ್ತರ ಮನೆಗೆ ವಾರಕ್ಕೆ ಒಂದು ಸರ್ತಿ ಅಂಬಿ ಜತೆ ಹೋಗಿ ಬರುತ್ತೇನೆ.

ಈ ಸಂಗತಿ ನಿಮ್ಮ ಘನವಾದ ಪತ್ರಿಕೆಯಲ್ಲಿ ಪ್ರಿಂಟ್‌ಮಾಡಿಸಿ, ಅದರ ಒಂದು ಪ್ರತಿಯನ್ನು ನನ್ನ ಹೆಸರಿಗೆ ವಿ.ಪಿ. ಮೂಲ್ಕ ಕಳಿಸಿ.

ಇಂತೀ ನಮಸ್ಕಾರಗಳು,

ಮರಿ, ಪ್ರತಿಮಿಕ ಶಾಲೆ,

ಬುಳ್ಳೂರು ಅಂಚೆ.

[ಒಂದು ಪ್ರತಿಯನ್ನಾದರೂ ಮಾರಬಹುದಲ್ಲಾ ಅಂತ ಇದನ್ನು ಪ್ರಚುರಪಡಿಸಿದ್ದೇವೆ. ರಾಜಕೀಯವಲ್ಲದ ವಿಷಯ ಪ್ರಚುರಿಸಲು ನಮಗೆ ಬಲು ಖುಷಿ.]

—ಸಂಪಾದಕ.

---

# ವಾಣಿಜ್ಯ ವ್ಯೂಹ

ನಾವು ಹನ್ನೆರಡು ಜನ ಕಾಲೇಜ್ ವಿದ್ಯಾರ್ಥಿಗಳು "ಕೂಡ್ಲಿ"ಗೆ ಭಾನುವಾರ ಮಧ್ಯಾಹ್ನ "ಸೈಕಲ್" ಪ್ರವಾಸ ಇಟ್ಟುಕೊಂಡಿದ್ದೆವು. ಕಾರಣ ನಮ್ಮ ರಾಜೈಂಗಾರಿ ಸೋದರ ಮಾವ "ಕೂಡ್ಲಿ"ನಲ್ಲಿ ರೇಂಜ್ ಆಧಿಕಾರಿ. ಆ ಭಾನುವಾರ ಅವರ ಒಬ್ಬನೇ ಮಗನ ಹುಟ್ಟಿದ್ಹಬ್ಬ. ರಾಜೈಂಗಾರಿ ಹೇಳಿದ, "ಲೋ ಈ ಭಾನುವಾರ ನೀವೆಲ್ಲಾ ಬನ್ರೋ, ಅಲ್ಲಿ ಒಳ್ಳೇ ಊಟ ಹಾಕಿಸುತ್ತೇನೆ. ನದಿ, ಮರಳು, ನಿಸರ್ಗ, ಸೌಂದರ್ಯ, ಸೊಬಗು ಎಲ್ಲಾ ನೋಡಿಕೊಂಡು ರಾತ್ರಿ ಬೆಳದಿಂಗಳಲ್ಲಿ ಹಿಂತಿರುಗಿ ಬರೋಣ. ಹೇಗೂ ಇಲ್ಲಿಂದ ಇಪ್ಪತ್ತು ಮೈಲಿ ದೂರ ಅಷ್ಟೇ! ಸೈಕಲ್ಲಿನಲ್ಲಿ ಎರಡು ಎರಡೂವರೆ ಗಂಟೆಯಲ್ಲಿ ಹೋಗಬಹುದು ಎಂದ. ತಾನು ಶನಿವಾರ ಸಾಯಂಕಾಲಾನೇ ಅಲ್ಲಿಗೆ ಹೋಗಿ, ಭಾನುವಾರದ ಕಾರ್ಯಕ್ರಮಗಳನ್ನೆಲ್ಲಾ ಮೊದಲೇ ಸರಿಮಾಡುತ್ತೇನೆ ಎಂದೂ ಹೇಳಿದ.

ನಾವು ಹನ್ನೆರಡು ಜನವೂ ಬೆಂಗಳೂರನ್ನು ಭಾನುವಾರ ಬೆಳಿಗ್ಗೆ ಎಂಟು ಗಂಟೆಗೆ ಬಿಟ್ಟೆವು. ಇನ್ನೂ ಪೌರಸಭೆಯ ಗಡಿಯನ್ನೂ ದಾಟಿಲ್ಲ, ಅಷ್ಟರಲ್ಲೇ ನನ್ನ ಸೈಕಲ್ಲಿನ ಹಿಂದಿನ ಚಕ್ರ ಸ್ವಲ್ಪ ಢಗ ಢಗ ಅಂತು. ನನ್ನ ಎದೇನೂ ಢಗ ಢಗ ಅಂತು. ಆ ಚಕ್ರ ಉಸಿರು ಬಿಟ್ಟರೆ, ಉಳಿದವರೆಲ್ಲಾ "ಲೋ ಅಪಶಕುನ ಆಯ್ತು, ನೀನು ಮನೆಗೆ ಹೋಗು ಎಂದು ಹೇಳಿ ಎಲ್ಲಿ ಮುಂದಕ್ಕೆ ಹೊರಟು ಹೋಗ್ತಾರೋ ಎಂಬ ಭಯ. ದೇವರ ದಯ ಪಕ್ಕದಲ್ಲೇ ಒಂದು ಸೈಕಲ್ ಅಂಗಡಿ. ಸೈಕಲ್ ಇಳಿದೆ. "ಲ್ರೋ! ಎಲ್ಲರೂ ಸೈಕಲ್ಲುಗಳಿಗೆ ಗಾಳಿ ಸರಿಯಾಗಿದೆಯೇ ಇಲ್ಲೇ ನೋಡಿಕೊಳ್ಳೋಣ. ಸ್ವಲ್ಪ ಎಣ್ಣೆ, ಗಾಳಿ ಹಾಕಿಸಿಕೊಂಡು ಹೋಗೋಣ ಎಂದೆ. ಎಲ್ಲರೂ ಹ್ಞೂ ಅಂತ ಇಳಿದರು.

ಅಂಗಡಿಯಲ್ಲಿದ್ದ "ಚೋಕ್ರಾ"ಗೆ ಬಲು ಖುಷಿ. ಇಷ್ಟು ಸೈಕಲ್‌ಗಳು ಅಂದರೆ ಕಡೇಗೆ ಎರಡು ರೂಪಾಯಾದರೂ ಸಿಗುತ್ತೆ ಅಂತ. ಬೇಗ ನನ್ನ ಸೈಕಲ್ ನೋಡಿದ. "ಸಾರ್ ಎಲ್ಲೋ 'ಪಂಕ್ಚರ್' ಆಗ್ಬೈತೆ. ಬ್ಲೋ ಹೊಡೆದರೆ ಒಂದು ಐದು ಮೈಲಿ ನಿಲ್ಲಬಹುದು. ಒಂದು ಐದು ನಿಮಿಷ ಟೇಂ ಕೊಟ್ಟರೆ, ಪ್ಯಾಚ್ ಹಾಕಿ ಕೊಡ್ತೀನಿ ಅಂದ. ಇಪ್ಪತ್ತು ಮೈಲಿ ಹೋಗಬೇಕು. ನಿಟ್ಟುಸಿರು ಬಿಡೋ ಬೈಸಿಕಲ್‌ನ ಹೇಗೆ ನಂಬೋದು ಅಂತ ಆಗಲಿ ಎಂದೆ. ಐದೇ ನಿಮಿಷದಲ್ಲಿ ಟ್ಯೂಬ್ ತೆಗೆದು, ಅದನ್ನು ನೀರಲ್ಲಿ ಅಭಿಷೇಕ ಮಾಡಿ, ನೋಡಿ ಸಾರ್ ಇಲ್ಲಿ ಎಂದು ತೋರಿಸಿ, ಅದಕ್ಕೊಂದಿಷ್ಟು ಕಾಯಕಲ್ಪ ಮಾಡಿ,

ತಿರುಗಿ ಜೀವದುಸಿರು ತುಂಬಿದ. ಆ ಮೇಲೆ ಉಳಿದವರ ಸೈಕಲ್ಲುಗಳ ಮೇಲೆಲ್ಲಾ ಒಂದು ತನಿಖೆ ನಡಿಸಿ, ಒಂದಕ್ಕಿಷ್ಟು ಗಾಳಿ, ಒಂದಕ್ಕೆ ಬ್ರೇಕ್ ಸರಿಮಾಡೋದು ಒಂದಕ್ಕೆ ಸರಪಣಿ ಸ್ವಲ್ಪ ಬಿಗಿಸೋದು ಹೀಗೆಲ್ಲಾ ಮಾಡಿ ಆಡಳಿತ ಯಂತ್ರ ಬಿಗಿಯಾಗುವಂತೆ ಮಾಡಿದ. ಒಟ್ಟು ನಾಲ್ಕು ರೂಪಾಯಿ ಪಡೆದ ನಮ್ಮಿಂದ.

"ಹರಹರ ಮಹಾದೇವ" ಎಂದು ಜಯಕಾರ ಮಾಡುತ್ತಾ ಎಲ್ಲರೂ ಸೈಕಲ್ ಹತ್ತಿದೆವು.

ನಾಲ್ಕೈದು ಮೈಲಿ ಹೋಗಿದ್ದೇವೆ. ಒಂದು ಫರ್ಲಾಂಗ್ ದೂರದಲ್ಲಿ ಒಂದು ಹಳ್ಳಿ ಕಾಣಬಂತು. ರಸ್ತೆ ಪಕ್ಕದ ಹಳ್ಳಿ. ನಾಲ್ಕು ಗುಡಿಸಲುಗಳು ಕಾಣಬಂದುವು. ಅಷ್ಟರಲ್ಲೇ ನನ್ನ ಪಕ್ಕದಲ್ಲಿದ್ದ ಶ್ಯಾಮು ಅಂದ—"ಲೋ! ಯಾಕೋ ಹಿಂದಿನ ಚಕ್ರ ಎದೆ ಹೊಡೆದ ಹಾಗೆ ಹೊಡೆಯುತ್ತಲ್ಲೋ" ಅಂದ. ನಾನಂದೆ "ಒಂದೇ ಫರ್ಲಾಂಗ್ ಕಣೋ ಭಾರ ಬೀಳದ ಹಾಗೆ ಕೂತುಕೊಂಡು ಸವಾರಿ ಮಾಡು, ಅಲ್ಲಿ ಏನಾದರೂ ಮಾಡೋಣ" ಅಂತ.

ಹಳ್ಳಿ ಬಂತು. ಒಂದು ಹೋಟಲು, ಒಂದು ಬೀಡಿ ಅಂಗಡಿ, ಒಂದು ಸೈಕಲ್ ಷಾಪ್! ಎದೆಗೆ ಹಾಲೆರೆದಂತಾಯ್ತು. ಅಲ್ಲಿ ಇಳಿದೆವು. ಅಲ್ಲಿದ್ದ ಹುಡುಗ ಹೇಳಿದ, "ಸಾರ್ ಸೈಕಲ್ ಟ್ಯೂಬ್ ಪಂಕ್ಚರ್ ಆಗೈತಿ. ಐದೇ ನಿಮಿಷ ಪ್ಯಾಚ್ ಹಾಕ್ತೀನಿ" ಅಂತ.

ಸರಿ! ಅವನು ಶ್ಯಾಮುನ ಸೈಕಲ್‌ನ ಸರಿಮಾಡಿದ. ಅಷ್ಟು ಹೊತ್ತಿಗೆ ರಾಮು ಹೇಳಿದ ಹೇಗೂ ಇಳಿದಿದ್ದೇವೆ, ನಾನೂ ಒಂದಿಷ್ಟು ಗಾಳಿ ಹೊಡಿಸ್ತೀನಿ ಯಾಕೋ ಸ್ವಲ್ಪ ಕಡಿಮೆ ಆದಹಾಗಿದೆ ಅಂತ. ಸರಿ! ಅವನ ಚಕ್ರಗಳಿಗೂ ಉಸಿರು ತುಂಬಿದ್ದಾಯಿತು.

ಹೊರಟೆವು. ನಾಲ್ಕೈದು ಮೈಲಿ ಹಾಡು ಹೇಳುತ್ತಾ ನಡೆದೆವು. ಒಂದು ಫರ್ಲಾಂಗ್ ಇನ್ನೂ ಇರಬಹುದು, ದೂರದಲ್ಲಿ ಇನ್ನೊಂದು ಹಳ್ಳಿ ಕಾಣುತ್ತಾ ಇತ್ತು. ಅಷ್ಟರಲ್ಲೇ ರಾಮು ಹೇಳಿದ "ಲೋ! ನನ್ನ ಹಿಂದಿನ ಚಕ್ರ" ಅಂದ. ಅಷ್ಟರಲ್ಲೇ ನಾನೂ ಶ್ಯಾಮೂ ದನಿಗೂಡಿಸಿ ಹೇಳಿದೆವು. "ಹೌದು! ಹೌದು ಢಗ ಢಗ ಎಂತ ಎದೆ ಹಾರಿದ ಹಾಗೆ ಹಾರುತ್ತಿದೆ ಅಲ್ಲವೇ" ಅಂತ. "ಹೌದೊ! ನಿಮಗೆ ಹೇಗೆ ಗೊತ್ತಾಯಿತು ಎಂದ. ಪೀಠದಿಂದ ನಿನ್ನ ಭಾರ ತೆಗಿ, ಮುಂದಿನ ಚಕ್ರದ ಮೇಲಕ್ಕೆ ಭಾರ ಬಿಡುವಂತೆ ಬಾಗು, ಒಂದು ಫರ್ಲಾಂಗ್ ಕಸರತ್ ಮಾಡು ಎಂದೆವು.

ಹಳ್ಳಿ ಸಿಕ್ಕಿತು. ಯಥಾ ಪ್ರಕಾರ, ಒಂದು ಹೋಟಲು, ಒಂದು ಬೀಡಿ ಅಂಗಡಿ, ಒಂದು ಸೈಕಲ್ ಷಾಪ್, ಒಬ್ಬ ಹೈದ. ರಾಮು ಬೈಸಿಕಲ್‌ಗೆ ಅಲ್ಲಿ ಪಂಕ್ಚರ್ ರಿಪೇರಿ ಐದೇ ನಿಮಿಷದಲ್ಲಾಯ್ತು. ಅಷ್ಟು ಹೊತ್ತಿಗೆ, ಕಿಟ್ಟಿ ಬೈಸಿಕಲ್

ತಂದು ನಾನೂ ಒಂದಿಷ್ಟು ಗಾಳಿ ಹೊಡಿಸ್ತೀನಿ ನನ್ನ ಮುಂದಿನ ಚಕ್ರ ಯಾಕೋ ಸರಿಯಾಗಿ ನಡೆಯುಲ್ಲ ಅಂದ. ಸರಿ! ಅವನ ಮುಂದಿನ ಚಕ್ರಕ್ಕೆ ಗಾಳಿ ತುಂಬಿದ್ದಾಯಿತು.

ಹೊರಟೆವು, ಇನ್ನೂ ಎರಡು ಫರ್ಲಾಂಗಿದೆ. ಅಷ್ಟರಲ್ಲೇ ಕಿಟ್ಟಿ ಹಿಂದಕ್ಕೆ ನನ್ನ ಜತೆಗೇ ಬಿದ್ದ. ಸ್ವಲ್ಪ ತೂಕದ ಆಸಾಮಿ ಆದ್ದರಿಂದ ನಾನು ಯಾವಾಗಲೂ ಹಿಂದೆ, ಸೈನ್ಯದಲ್ಲಿ ಜನರಲ್‌ಗಳಿದ್ದ ಹಾಗೆ—"ಲೋ, ಯಾಕೋ ಮುಂದಿನ ಚಕ್ರ" ಅನ್ನುವಾಗಲೇ ನಾನಂದೆ "ಢಗ ಢಗ" ನೋಡು ಎರಡೇ ಫರ್ಲಾಂಗ್ ಇದೆ. ಆಗಲೇ ಹಳ್ಳಿ ಕಾಣಿಸುತ್ತಾ ಇದೆ. ನೀನು ಕ್ಯಾರಿಯರ್ ಮೇಲೆ ಕೂತುಕೊಂಡು ಸವಾರಿ ಮಾಡು, ಮುಂದಿನ ಚಕ್ರಕ್ಕೆ ತ್ರಾಸು ಕಡಿಮೆ ಆಗುತ್ತೆ. ಎಂದು ಅವನ ಕೈಲಿ ಸರ್ಕಸ್ ಮಾಡಿಸುತ್ತಾ ಹಳ್ಳಿ ಸೇರಿದೆವು. ಅಲ್ಲಿ ಯಥಾ ಪ್ರಕಾರ ಮುಂದಿನ ಚಕ್ರಕ್ಕೆ "ಪ್ಯಾಚ್, ಪಂಕ್ಚರ್" ಸೇವೆ ಆಯಿತು ಅಲ್ಲೇ ಗಜಪತಿ ತನ್ನ ಸೈಕಲ್ಲಿನ ಹಿಂದಿನ ಚಕ್ರಕ್ಕೆ ಸ್ವಲ್ಪ ಗಾಳಿ ಬಿಡಿಸಿಕೊಂಡ.

ಕೂಡ್ಲಿ ಸೇರುವ ಹೊತ್ತಿಗೆ ಮಟ ಮಟ ಮಧ್ಯಾಹ್ನ. ಹನ್ನೆರಡು ಗಂಟೆ. ರಾಜೈಂಗಾರಿ ಸೋದರ ಮಾವ ಅಚ್ಚುಕಟ್ಟಾದ ಊಟ ಹಾಕಿಸಿದರು. ದಿಟ ಹೇಳಿದರೂ ನಂಬುತ್ತೀರಿ! ಸುಳ್ಳು ಹೇಳಿದರೂ ತಥಾ! ಮೂರು ಸಾರಿ ಅನ್ನ ಕಲೆಸಿದೆವು. ಒಂದು ಚೂರು ಕಲ್ಲು ಸಿಗಬೇಕಲ್ಲಾ! ಅಂತಹ ಅನ್ನ ತಿಂದು ವರ್ಷಾಂತರಗಳಾಗಿತ್ತು. ಪುಳಿಯೋಗರೆ ಬೇರೆ, "ಸೀ ಚಕ್ಕುಲಿ" ಅಂತೆ ಅದು ಬೇರೆ. ಗಡದ್ದಾಗಿ ತಿಂದು, ಉಸಿರು ಬಿಡೋದೇ ಕಷ್ಟವಾಗುವ ಹಾಗಾದಾಗ ಎದ್ದೆವು. ಕೈತೊಳೆದು, ಮರದ ಕೆಳಗೆ ನಿಸರ್ಗ ಸೌಬಗಿನ ಮಧ್ಯೆ ಏನನ್ನೂ ಕಾಣದೆ ಕಣ್ಮುಚ್ಚಿದೆವು.

ಎದ್ದಾಗ ನಾಲ್ಕು ನಾಲ್ಕೂವರೆ ಗಂಟೆ. ಸರಸ್ಸಿನಲ್ಲಿ ಮುಖ ತೊಳೆದು, ಕಾಫೀಗೆ ಕೂತಾಗ—ಹಿರಿಯರು—ಕೇಳಿದರು, "ರಾಜು ಹೇಳಿದ ಹತ್ತು ಗಂಟೆಗೆ ನೀವೆಲ್ಲಾ ಬರ್ತೀರಿ ಅಂತ. ಯಾಕೆ ಇಷ್ಟು ಹೊತ್ತಾಯಿತು; ಬಹಳ ದಣಿದಿದ್ದಿರಿ, ಅದಕ್ಕಾಗಿ ಆಗಲೇ ಕೇಳಲಿಲ್ಲ" ಎಂದು.

ನಮ್ಮ ಪಂಕ್ಚರ್ ಪ್ಯಾಚ್ ಪ್ರವರಗಳನ್ನೆಲ್ಲಾ ಒಪ್ಪಿಸಿದೆವು. ಗಹಗಹಿಸಿ ನಕ್ಕು, ರಾಜೈಂಗಾರಿ ಸೋದರ ಮಾವ ಹೇಳಿದರು. "ಅಯ್ಯೋ! ನೀವಿನ್ನೂ ಹುಡುಗರು, ಏನೂ ಅರಿಯುದವರು. ಈ ಸೈಕಲ್ ಷಾಪಿನವರೆಲ್ಲಾ ಒಂದು ವಾಣಿಜ್ಯ ಯೋಜನೆ ಹೂಡಿದ್ದಾರೆ. ಒಂದು ಬೈಸಿಕಲ್ ರಿಪೇರಿ ಮಾಡಿದಾಗ, ಇನ್ನೊಬ್ಬ ಏನಾದರೂ ಇನ್ನೊಂದು ಸೈಕಲ್ ತೋರಿಸಿದರೆ ಸಾಕು, ಅದು ಐದು ಮೈಲಿಗಳಲ್ಲಿ ಊನ ಆಗೋ ಹಾಗೆ ಎಲ್ಲೋ ಮಾಯದಲ್ಲಿ ಒಂದು

ಪಂಕ್ಚರ್ ಮಾಡಿಬಿಡ್ತಾರೆ. ಮುಂದಿನ ಸೈಕಲ್ ಷಾಪಿನವನಿಗೆ ಅನುಕೂಲ ಆಗಲಿ ಅಂತ. ಇನ್ನೊಂದು ಸೈಕಲ್ ಇಲ್ಲದೇ ಇದ್ದರೆ, ಪಂಕ್ಚರ್ ಸರಿಮಾಡಿದ ಮೇಲೆ ಇನ್ನೊಂದು ಚಕ್ರ ಐದು ಮೈಲಿಗಳಲ್ಲಿ ಉಸಿರುಬಿಡುವಂತೆ, ಪಂಕ್ಚರ್ ಮಾಡೇ ಬಿಡುತ್ತಾರೆ. ಆದಕ್ಕೇ ನಾನು ನನ್ನ ಸೈಕಲ್ ಪಂಕ್ಚರ್ ಆದರೇ ನಾನೇ ಪ್ಯಾಚ್ ಹಾಕ್ತೀನಿ" ಎಂದರು.

ಕೆಲವಂ ಬಲ್ಲವರಿಂದೆ ಕಲ್ತು---ಅಲ್ಲಾ! ಈ ಹಳ್ಳಿ ಹಳ್ಳಿ ಸೈಕಲ್ ಷಾಪಿನವರೂ ಟ್ರೇಡ್ ಯೂನಿಯನ್ ಹೀಗೆ ಶುರು ಮಾಡಿದರೆ! ಹಾಗೂ ರಾಜೈಂಗಾರಿ ಸೋದರ ಮಾವ, ಪಂಕ್ಚರಿಗೆ ಪ್ಯಾಚ್ ಹಾಕೋ ಕಲೆ ಕಲಿತವ ನಮ್ಮ ಜತೆಯಲ್ಲಿದ್ದಿದರೆ, ಎಷ್ಟು ಚೆನ್ನಾಗಿತ್ತು ಎನ್ನಿಸಿತು.

ಈ "ವಾಣಿಜ್ಯ ವ್ಯೂಹ" ಇನ್ನೂ ಯಾವ ಯಾವ ಕಸಬುಗಳಿಗೆ ಬರುತ್ತೋ! ಬಂದಿದೆಯೋ!—ವೈದ್ಯರುಗಳು—ಲಾಯರುಗಳು—ವಾದ್ಯಾರುಗಳು—ದೇವರೇ ಬಲ್ಲ!

—ಶಿವಣ್ಣ.



ಹಲೊ! ಹಲೊ! ಹಲೊ!
ಓ! ರಾಂಗ್ ನಂಬರ್!

# ಈ ಮಕ್ಕಳ ವಿಮರ್ಶೇನೋ?

ಚಿತ್ರಗಳ ಪ್ರದರ್ಶನ. ಹೆಸರಾಂತ ಚಿತ್ರಕಾರರೆಲ್ಲಾ ತಮ್ಮ ಕಲೆಯ ಬಲೆಯನ್ನು ಹೂಡಿದ್ದರು ಅಲ್ಲಿ. ರಾಷ್ಟ್ರಾಧ್ಯಕ್ಷರೇ ತಮ್ಮ ಸ್ವಹಸ್ತದಿಂದ ತಮ್ಮ ನಾಮಾಂಕಿತದ ಪ್ರಥಮ ಬಹುಮಾನವನ್ನು ಚಿತ್ರಗಾರ ಕೋವಿದರಾಯರಿಗೆ ಕೊಟ್ಟಿದ್ದರು.—ಆತನ ಚಿತ್ರ "ಗಂಗಾವತರಣ".

ನಾನು, ನನ್ನ ಪುಟ್ಟ ಮಗಳು ವಿಮ್ಮುವನ್ನು ಕರೆದುಕೊಂಡು ಅಲ್ಲಿಗೆ ಹೋದೆ. ದಿವ್ಯವಾದ ಚಿತ್ರಗಳು, ಭವ್ಯವಾದ ದೃಶ್ಯಗಳು, "ಗಂಗಾವತರಣ" ನೋಡಿದೆ, ಬಲು ಅಂದವಾಗಿತ್ತು. ಶಿವನ ನಿಲುವು, ಈ ಮೂಲೆಯಲ್ಲಿ ತಪಸ್ವಿ ಭಗೀರಥ, ಮೇಲಿಂದ ಭೋರ್ಗರೆಯುತ್ತ ಅವತರಿಸುತ್ತಿರುವ ಗಂಗಾದೇವಿ, ಪ್ರಳಯಗೈವೆನೆಂಬ ಆಕೆಯ ಅಟ್ಟಹಾಸದ ನೋಟ, ಜಡೆಯಲ್ಲೇ ಸಿಕ್ಕಿಸಿ ಇವಳಿಗೆ ಜ್ಞಾನ ಬರುವಂತೆ ಮಾಡುವೆ ಎಂಬ ಶಿವನ ದೃಷ್ಟಿ, ಹೇಗೂ ಅವನ ಪ್ರೇಯಸಿ ಅಲ್ಲವೇ? ಅವಳು ದಾರಿ ತಪ್ಪಿದರೆ, ಇವನೇ ಅಲ್ಲವೇ ಅವಳಿಗೆ ಬುದ್ಧಿ ಕಲಿಸಬೇಕು.

"ಹೇಗಿದೆಯೇ ವಿಮ್ಮು" ಎಂದೆ.

ಇದೇನು ಮಹಾ ಚಿತ್ರ ಅಣ್ಣಾ! ಆ ಗಂಗೆಯ ಕೈನಲ್ಲಿರೋ ಬಳೇ ನೋಡಣ್ಣಾ, ಆ ನಾರ್ಗಿಸ್ ಬಳೇನ ಹೋದ ವರುಷ ಕಂಡುಹಿಡಿದರಣ್ಣಾ! ಮತ್ತೆ ಗಂಗೇಗೆ ಹೇಗೆ ಗೊತ್ತಿತ್ತಣ್ಣಾ!" ಎಂದಳು.

ಈ ಮಕ್ಕಳ ವಿಮರ್ಶೇನೆ ಹೀಗೆ ಅಲ್ಲವೇ? ಅಪ್ರಕೃತ. ಅನುಚಿತ.




ಸುಂಕದ ಕಟ್ಟೆಯೋನು ಎಲ್ಲಣ್ಣಾ?

—ಸುಖದುಃಖ ಹೇಳಿಕೊಳ್ಳುಕ್ಕೆ ಅವನ ಅಧಿಕಾರಿ ಹತ್ತಿರ ಹೋಗವ್ನೆ.

# ಅಂಚೆ—ಕೆಂಚಯ್ಯ

ತಿಮ್ಮಕ್ಕನ ಮಗ ಮಿಲಿಟ್ರಿಗೆ ಸೇರಿದ್ದು ಹೊಸಹಳ್ಳೀಲಿ ದೊಡ್ಡ ರಾಮಾಣ್ಯ. ಕೈಗೆ ಬಂದ ಹುಡುಗ ಕಾಕಿ ಹಾಕಿಬಿಟ್ಟನಲ್ಲಾ, ಅಂತ ತಿಮ್ಮಕ್ಕ ಗೋಳಾಡಿದ್ದೂ ಆಡಿದ್ದೆ. ಹೋದವನು ಹೋದ! ೪೦ನೇ ಇಸವಿಯಲ್ಲಿ ಊರಿಂದ ಪರಾರಿಯಾದವನು ಮೊನ್ನೆ ಬಂದ ನೋಡಿ, ಮತ್ತೆ... ಹತ್ತು ವರ್ಷ ಸುಮ್ಮಗಿದ್ದು ಬಿಡೋದೇ, ಹೊಟ್ಟೇಲಿ ಹುಟ್ಟಿದ ಪದಾರ್ಥ? ಏನನ್ಯಾಯ.

ಕೈ ಮರದ ಹತ್ತಿರ ಬಸ್ ಇಳಿದು, ಉದ್ದಕ್ಕೂ ಊರು ರಸ್ತೆ ಮೇಲೆ ಬರ್ತಾನೇ ಇದ್ದ. ಪುಣ್ಯಕ್ಕೆ, ಅಂಚೆ ಜವಾನ ಕೆಂಚಯ್ಯ, ಕೆಲಸ ಮುಗಿಸಿಕೊಂಡು, ಖಾಲಿ ಚೀಲ ಸಹಿತ ಸಿಕ್ಕಿಬಿದ್ದ. ಕೆಂಚಯ್ಯ ಕಾಣದ ನರಪಿಳ್ಳೆ ಯಾವುದಿದೆ, ಆ ತಾಲ್ಲೋಕಿನಲ್ಲಿ? ಬಾರೋ, ಪಾಪಯ್ಯ! ದೇವರು ನಿನ್ನನ್ನ ಚೆನ್ನಾಗಿ ಕಾಪಾಡಿದಾನೆ; ನಿನ್ನ ತಾಯಿ ಕೇಳಿಕೊಂಡು ಬಂದಿದ್ದಳು. ಬಾ! ಹೋಟಲಿಗೆ ಹೋಗಿ ಒಂದು ಕಫ್ ಚಾ ಬಸಿದುಕೊಳ್ಳೋಣ, ಅಂತ ಅವನನ್ನ ಕರೆದ. ಅಷ್ಟು ಹೊತ್ತಿಗೆ ಕೆಂಚಯ್ಯನಿಗೆ ಜ್ಞಾಪಕಕ್ಕೆ ಬಂತು, ಹಳ್ಳಿ ಹೋಟಲೆಲ್ಲ ಬಂದ್, ಅಂತ....

ದಾರಿ ಉದ್ದಕ್ಕೂ ಪಾಪಯ್ಯ ಏನೇನೋ ಬುರುಡೆ ಹೊಡೀತಾ ನಡೆದ. ಅಮೇರಿಕಾಗೆ ಹೋಗಿದ್ದೆ, ಸ್ಟಾಲಿನ್ ನೋಡಿದ್ದೆ, ನೆಹರು ಅಲ್ಲಿಗೆ ಬಂದಿದ್ದಾಗ ನೋಡಿದ್ದೆ, ಅಂತ ಏನೇನೋ ಬಿಟ್ಟ. ಆದರೆ, ಕೆಂಚಯ್ಯ ಕಾಣನೆ ಹೈದನ ಗುಣಾನ? ಬೆಂಗಳೂರು ಸಿನಿಮಾದಾಗೆ ನೆಹರೂ ಪಿಚ್ಚರ್ ಬಂದತ್ತಂತೆ, ಅದರಲ್ಲಿ ನಿನ್ನನ್ನ ಯಾರೋ ನೋಡಿದರಂತೆ, ನಿನಗೆ ಬಂದಿರುವ ಮೆಡ್ಲು ಗಿಡ್ಲು ಏನು ಮಾಡಿದೆ, ಮೂವತ್ತೆಂಟು ಬಂದಿವೆಯಂತೆ, ಎಂದೆಲ್ಲ ಅವನೂನೂ ಕೋಟಿಗೆ ಕೋಟಿ ಏರಿಸಿದ.

ಪಾಪಯ್ಯನ ಬಣ್ಣ ಬಯಲಾಯಿತು. ಅವನು ದಮ್ಮಯ್ಯಗುಡ್ಡೆ ಹಾಕಿದ. ತಾನು ಹೇಳಿದ್ದೆಲ್ಲ ಸುಳ್ಳು ಅಂತ ಒಪ್ಪಿಕೊಂಡ. ಅದೇ ಸಮಯ ಕಾದಿದ್ದ ಕೆಂಚಯ್ಯ, "ಅಲ್ಲಯ್ಯ ತಾಯಿ ಎಂಬೋ ಒಂದು ಮುದಿ ವಸ್ತು ಮೇಲೆ ನಿನಗೆ ಎಷ್ಟೊಂದು ತಿರಸ್ಕಾರ. ಮೊದಲನೆಯ ತಿಂಗಳು, ನೀನು ಹೊರಟು ಹೋದ ಹೊಸದರಲ್ಲಿ ಎರಡು ಕಾಗದ ಬರೆದಿ, ೩ ರೂಪಾಯಿ ಕಳುಹಿಸಿದಿ. ಆಯಿತು,

ಅಲ್ಲೇ ಸಿಲ್ಲಿಸಿಬಿಟ್ಟೆಯಲ್ಲಾ, ನಿನ್ನ ಋಣ ತೀರಿತು ಅಂತ. ಅವಳು ಅದು ಹೇಗೆ ತಾನೆ ಜೀವ ಹಿಡಿದು ಬದುಕಾಳು? ನಿನ್ನ ಆ ಮೂರು ಕಾಗದಾನ್ನೂ ವೇ ನಾನೇ ಅವಳಿಗೆ ಓದಿ ಹೇಳಿದೆ. ಆಗ, ಅವಳ ಮುಖದಲ್ಲಿ ಹಾಲುಕ್ಕಿ ಏಳುವ ಹಾಂಗೆ, ಗೆಲುವು ಉಕ್ಕಿ ಬಂತು; ನಂತರ ನಾನೇನು ಮಾಡಿದೆ ಗೊತ್ತೆ? ನಿನ್ನ ಕಾಗದ ಬಂತು ಅಂತ ಹೇಳೋದು, ಪ್ರಿಂಟಾದ ಕತ್ತೆ ಕಾಗದದ ತುಂಡೊಂದನ್ನು ಹಿಡಿದು, ಅವಳೆದುರು ಓದುವುದು... ತಾಯಿಗೆ ಪಾಪಯ್ಯ ಮಾಡುವ ನಮಸ್ಕಾರ ಗಳು, ನಾನು ಸುಖವಾಗಿದೇನೆ, ಇತ್ಯಾದಿ—ನನಗೆ ಸಂಬಳ ಬಡ್ತಿಯಾಗಿ ಸಿಕ್ಕಿದೆ, ಹೀಗಂತ....ಗೊತ್ತಾಯಿತು, ನಿನ್ನ ಅನುಮಾನ? ಮನಿಆರ್ಡರ್ ತಾನೆ? ೩ ರೂಪಾಯಿಾನ ಪ್ರತಿ ತಿಂಗಳೂ ನಾನೇ ಆಕೆಗೆ ಕೊಡುತ್ತಿದ್ದೆ....ನಿನ್ನ ಕಾಣಿಕೆ ಅಂತ....ಆ ಮೇಲೆ, ನಿನಗೆ ಬಡ್ತಿ ಸಿಕ್ಕಿದಾಗ, ೫, ೭ ಅಂತ ಹೆಚ್ಚಿಸಿದೆ. ಇಲ್ಲ ದಿದ್ದರೆ, ಆ ಬಡ ಪ್ರಾಣಿಗೆ ನಂಬಿಕೆ ಬರಬೇಕಲ್ಲಾ....ನಿನ್ನ ಮೇಲೇನೇ ಅವಳ ಉಸಿರು ನಿಂತಿದೆ! ಪಾಪ! ಪಾಪ! ಅವಳ ಗೋಳಿಗೆ ದೇವರು ಕರಗೇನೇ ನಿನ್ನನ್ನ ಗುಂಡಿನ ಬಾಯಿನಿಂದ ತಪ್ಪಿಸಿ ತಂದದ್ದು... ಸರಿ! ಹೋಗಪ್ಪ, ಬೇಗ! ಇನ್ನು ಮೇಲಾದರೂ, ಒಳ್ಳೇ ಮಗನಾಗಿರು; ಅಳಬೇಡ, ಪಾಪಯ್ಯ, ಥೂ! ಸಾಕು, ನಿಲ್ಲಿಸು! ಆಕೆ ಸಂಕಟ ನೋಡಿದ್ದವನಿಗೆ ಎಂಥ ಕಲ್ಲೆದೆಯಾದರೂ ಕರಗಿ ನೀರಾಗುವುದು! ಮನೆಗೆ ಹೋಗು....ನಾನು ಮುಂದಿನ ಬಂದರೆ ಬರು ತ್ತೇನೆ....ಕೆಂಚಯ್ಯ ಹೊರಟೇಬಿಟ್ಟ. ಪಾಪಯ್ಯ ಅಲ್ಲೇ ಕೊಂಚ ಹೊತ್ತು ಕುಳಿತು, ಕಣ್ಣೊರಸಿಕೊಂಡು, ಮುಂದೆ ನಡೆದ.

---

ರಿಪಬ್ಲಿಕ್ ದಿನಾಚರಣೆಯ ದಿನ ಸಕ್ಕರೆಯನ್ನು ಹಂಚುತ್ತಿದ್ದಾಗ, ಅದ ನ್ನೆಂದೂ ತಿಂದರಿಯದ ಅನೇಕ ಮಕ್ಕಳು ಬೇಡ ಬೇಡವೆಂದು ಓಡಿಹೋದುವಂತೆ.

* * *

ಈಚೆಗೆ ಅನೇಕರಿಗೆ ಛಳಿ ಬಿಟ್ಟುಹೋಗಿದೆ ಎಂದು ಹವಾಮಾನ ತಿಳಿದವರು ಅಭಿಪ್ರಾಯ ಪಡುತ್ತಿದಾರೆ.

# ಊಟದ ಚರ್ಚೆ

---

ಸಾಹುಕಾರರ ಮನೆಯಲ್ಲಿ ಹೆಚ್ಚುಕಟ್ಟಳೆ ಊಟದ ಏರ್ಪಾಟಿದೆ, ಎಂದು ನಂಬಲರ್ಹವಾದ ಕಡೆಗಳಿಂದ ಸುದ್ದಿ ಬಂದ ಕೂಡಲೇ ಪತ್ರಿಕಾ ಪ್ರತಿನಿಧಿಗಳೂ ವಿಶೇಷ ಬಾತ್ಮೀದಾರರೂ ಅದರ ಒಳಮರ್ಮವನ್ನು ಹೊರಗೆಡಹಲು ಕಾತುರರಾದರು. ಊಟ ನಡೆಯುವ ದಿನವನ್ನಾದರೂ ತಮ್ಮ ಪತ್ರಿಕೆಗಳಲ್ಲಿ ಇತರರಿಗಿಂತ ಮೊದಲೇ ಪ್ರಕಟಿಸಬೇಕೆಂಬ ಕುತೂಹಲ ಅವರೆಲ್ಲರಿಗೂ ಇತ್ತು. ಅದಕ್ಕಾಗಿ, ಅವರು ಆ ಮನೆಯ ಸುತ್ತಮುತ್ತಲೂ ಠಳಾಯಿಸಿ, ಆಳು ಅಡಿಗೆಯವನು, ಡ್ರೈವರು, ಮಾಲಿ, ಇತ್ಯಾದಿಯವರನ್ನು ಹಗಲಿರುಳೂ ಪ್ರಶ್ನಿಸಿದರು. ಕೆಲವರು ಪಕ್ಷಿಶಾಸ್ತ್ರ, ಬುಧನಾಡಿ, ಹನುಮಜ್ಜ್ಯೋತಿಷ ಮುಂತಾದ ಪುರಾಣ ವೈಜ್ಞಾನಿಕ ಮಾರ್ಗಗಳನ್ನೂ ಅವಲಂಭಿಸಿದರು. ಊಟ ಉಂಟು; ಯಾವ ಯಾವ ಭಕ್ಷ್ಯ ಭೋಜ್ಯಗಳು ಎಂಬುದಿನ್ನೂ ಚರ್ಚೆಯಾಗುತ್ತಿದೆ, ಮನೆಯ ದಂಪತಿಗಳಲ್ಲಿ, ಎಂಬ ಗುಟ್ಟನ್ನು ಅಡಿಗೆಯವನು ಬಹಿರಂಗ ಪಡಿಸಿದಾಗಲೇ ವಾಚಕವೃಂದಕ್ಕೆ ಕಿಂಚಿತ್ ತೇಗು ಬಂದದ್ದು. ಊಟಕ್ಕೆ ಬರಬಹುದಾದ ಎಲ್ಲರನ್ನೂ ಕರೆಸಿ, ಅವರ ಸಲಹೆ ಪಡೆದು ಅಡಿಗೆ ಪಟ್ಟಿಯನ್ನು ತಯಾರಿಸುವುದು ಸೂಕ್ತ, ಎಂದು ನಿರ್ಧರಿಸಿದಾರೆ, ಸಾಹುಕಾರರು ಎಂಬ ಒಂದು ವದಂತಿ ಹರಡಿತು. ಎಲ್ಲಾದರೂ ಉಂಟೆ? ಎಂದು ಅದನ್ನು ಹಲವು ಬಾತ್ಮೀದಾರರು ಅಲ್ಲಗಳೆದರು. ಏಕಾಗಬಾರದು ಎಂದು ಅದಕ್ಕೆ ಕಾಲ್ಕಟ್ಟಿದರು ಇನ್ನು ಕೆಲವರು. ಒಬ್ಬಿಬ್ಬರು ತೀರ ಹತ್ತಿರದವರನ್ನು ಮಾತ್ರ ಕರೆಯಿಸಿ ಕೇಳಬಹುದು ಎಂದು ಮಾಲಿ ಊಹಿಸಿದನಂತೆ; ಕಡೆಗೆ ಅವನ ಊಹೆಯೇ ಸರಿಯಾಗಿರಬೇಕು; ಏಕೆಂದರೆ, ಹತ್ತಿರದ ನಂಟರಲ್ಲೊಬ್ಬರು, "ಅವತ್ತು ನೀನು ಊಟ ಹಾಕದೆ ಇದ್ದರೆ, ನನಗೇನು ನಷ್ಟವಿಲ್ಲ" ಎಂದು ರೇಗುತ್ತ, ಜಟಕಾ ಹತ್ತಿ ಹೊರಟುಹೋದರಂತೆ. ಇದಕ್ಕೆ ಕಾರಣ, ಆತನಿಗೆ ಅಂದು ಮಾಡಬೇಕೆಂದಿದ್ದ ಪದಾರ್ಥಗಳ ಪಟ್ಟಿ ಸರಿಬೀಳಲಿಲ್ಲ ಎಂಬುದೇ ಎಂದು ಹಲವು ಪತ್ರಿಕೆಗಳು ಟೀಕಿಸಿದುವು. ಹಲವರು ಹಾಗಲ್ಲವೆಂದರು. ಕೆಲವರು ಅವರ ಹಿಂದೆಯೇ ಜಟಕಾದಲ್ಲಿ ಹೊರಟು ವಿಷಯ ತಿಳಿದು ಬರುತ್ತೇವೆಂದರು.

ಅಷ್ಟರೊಳಗೆ, ಪ್ರತಿನಿಧಿಗಳ ಗಮನ ಬೇರೊಂದು ಸೋಜಿಗದ ಕಡೆ ತಿರುಗಿತು. ಊಟಕ್ಕೆ ಯಾರು ಯಾರು ಆಹ್ವಾನಿತರು ಎಂದು ಅವರು ಹುಡುಕಾಡಿದರು. ಎಷ್ಟು ಜನ ಬರುತ್ತಾರೆ, ಅವರ ಆರೋಗ್ಯಸ್ಥಿತಿ ಏನು, ಅವರು ಎಲ್ಲೆಲ್ಲಿ

ಕುಳಿತುಕೊಳ್ಳುತ್ತಾರೆ. ಮೊದಲು ಯಾರು, ನಂತರ ಯಾರು, ಈ ರೀತಿಯ ಊಹಾಪೋಹ ಬಲವಾಯಿತು, ಪತ್ರಿಕೆ ಪುಟಗಳು ತುಂಬಬೇಕಲ್ಲಾ! ಅದಕ್ಕಾಗಿ ಅವರು ಯಾರು ಯಾರನ್ನು ಆಹ್ವಾನಿಸಲಾರರು, ಯಾರ ಯಾರ ಮೇಲೆ ಜಿದ್ದು, ಮನಸ್ತಾಪ, ದ್ವೇಷ ಹಿಂದಿನಿಂದ ಬೆಳೆದು ಬಂದಿದೆ ಎಂಬುದನ್ನು ಹುಡುಕಿ ಒಂದು ಲಿಸ್ಟು ಪ್ರಕಟಿಸಿದರು. ಇನ್ನು ಕೆಲವರು, ಊಟದ ಮುಹೂರ್ತ ಯಾವತ್ತು ಎಂದು ಮನೆ ಜೋಯಿಸರನ್ನು ವಿಚಾರಿಸಿದರು. ಅವರು ಶುಕ್ರಾಸ್ತ ಮೌಢ್ಯ, ಅಮಾಸೆ, ಕೃಷ್ಣಪಕ್ಷ, ರಾಹುಕಾಲ, ಭರಣಿ, ಕೃತ್ತಿಕೆ ಅಂತ ತಳ್ಳುತ್ತ ಬಂದರು. ಬಾಳೆ ಎಲೆ, ಬಾಳೆ ದಿಂಡು, ಯಾವತ್ತು ಮಾರ್ಕೆಟ್ಟಿಂದ ತರಿಸುತ್ತಾರೆ ನೋಡುವ, ಎಂದು ಹಲವು ಬಾತ್ಮೀಗಳು ಅಲ್ಲೇ ಝಾಂಡ ಊರಿದರು. ಬ್ಯಾಂಕಿಂದ ಚಿಲ್ರೆ ಯಾವತ್ತು ತರಿಸುತ್ತಾರೆ, ಪತ್ತೆ ಹಚ್ಚುವ ಅಂತ ಕೆಲವರು ಅಲ್ಲಿ ನೆಲೆಸಿದರು.

ಅಷ್ಟರೊಳಗೆ, ಆಹ್ವಾನಿತರಾಗಬಹುದಾದವರಲ್ಲಿ ಒಳಜಗಳ ತಲೆದೋರಿದೆ, ಎಂಬ ಸುದ್ದಿ ಹರಡಿತು. ಆತ ಬಂದರೆ, ಈತ ಬರಲಾರ, ಈತನನ್ನ ಮೊದಲು ಕೂರಿಸಿದರೆ ಆತ ಎಲ್ಲೂ ಕೂರಲಾರ, ಆತನಿಗೆ ಆಶೌಚ, ಈತನಿಗೆ ಪುರುಡು, ಎಂಬ ವಿವರಗಳನ್ನು ಚಾಣಾಕ್ಷರಾದ ಬಾತ್ಮೀದಾರರು ಪತ್ತೆ ಹಚ್ಚಿದರು. ಅಂತು ಇಂತು ಅವರ ಮನೆ ಊಟ ಯಾವತ್ತು, ಯಾರಿಗೆ, ಏನೇನು ಎಂಬ ಚರ್ಚೆಯಲ್ಲಿ ಊರಿನ ಜನವೆಲ್ಲ ತಮ್ಮ ಊಟವನ್ನೇ ಮರೆತು ತಮ್ಮ ತಮ್ಮೊಳಗೇ ಕಾದಾಡುತ್ತಿದ್ದರು.

ಕಡೆಗೆ, ಒಬ್ಬ ಪತ್ರಿಕಾಪ್ರತಿನಿಧಿ, "ಇದೇನು ಹುಚ್ಚು! ನಮ್ಮ ಹಸಿವನ್ನು ನಾವೇ ಇಂಗಿಸಿಕೊಳ್ಳಬೇಕು; ಯಾರ ಮನೆಯಲ್ಲಿ ಯಾರಿಗೆ ಊಟ ದೊರೆತರೇನು? ನಮಗೆ ಏಕೆ ಈ ಚಿಂತೆ?" ಎಂದು ಖಂಡ ತುಂಡವಾಗಿ ಬರೆದೇಬಿಟ್ಟ. ಎಲ್ಲರಿಗೂ ಆಗ ಬುದ್ಧಿ ಬಂತು. ಚರ್ಚೆ ನಿಂತಿತು. ಎಲ್ಲ ತಣ್ಣಗಾಯಿತು.

—ಗಂಗಾಧರ.

——o——

ಗವರ್ನರ್‌ಮೆಂಟ್ ಹೌಸ್‌ನ ಕೆಲಸಗಾರರು ರಾಜಾಜೀಯವರನ್ನು ಬೀಳ್ಕೊಟ್ಟಾಗ ಅವರು ಹಿತವಾದ ಆಡಿದರಂತೆ "ದೇವರ ಹಾದಿಯನ್ನು ಹಿಡಿಯಿರಿ" ಎಂದು.

—ಇದೇನು ಕಷ್ಟ. ನಾವೇನೇ ಮಾಡಲಿ ಕಡೆಗದೇ ಗತಿ.

* * *

# ವಿಠ್ಠಲನ ಉಪಾಯ

ಅಂಬಾಲಾದಲ್ಲಿ ವಿಠ್ಠಲನಿಗೆ ಖಾಯಂ ಕೆಲಸ ಸಿಕ್ಕಿತು. ಇಲ್ಲಿಂದ ಸಂಸಾರ ಸಾಮಾನು ಸರಂಜಾಮು ಎಲ್ಲಾ ಸಾಗಿಸಿಕೊಂಡು ಹೋದ. ಅಲ್ಲಿ ವಾರಣವಾಗಿ ಸಂಸಾರ ಹೂಡಿದ.

ಆದರೆ, ಆ ಮನೆಯಲ್ಲಿ ಒರಳಕಲ್ಲೇ ಇಲ್ಲ. ದೋಸೆ ಇಡಲೀನೂ ಇಲ್ಲ.

ಕಡೇಗೆ ಬೆಂಗಳೂರಿಂದ ಒಂದು ಒರಳುಕಲ್ಲು ತರಿಸೋದು ಅಂತ ತೀರ್ಮಾನ ಮಾಡಿದ. ಬೆಂಗಳೂರಿಂದ ತರಿಸಲು ರೈಲ್ವೆ ಛಾರ್ಜು ೨೦೦ ರೂ. ಅಂತ ತಿಳಿಯಿತು. ಅಯ್ಯೋ! ಅಂದ.

ಕಡೆಗೆ ಅವರ ಮಾವ ಯಾರದೋ ಹೆಸರಿನಲ್ಲಿ ಒಂದು ಒರಳುಕಲ್ಲನ್ನು ಅಂಬಾಲಾಕ್ಕೆ "To Pay" ಹಾಕಿ, ಅಲ್ಲಿ ಇಲ್ಲದವರ ವಿಳಾಸಕ್ಕೆ ಕಳಿಸಿದರು. ಅಂಬಾಲಾ ನಿಲ್ದಾಣದಲ್ಲಿ ಒಂದು ತಿಂಗಳಾದನಂತರ, ಯಾರೂ ಈ ಒರಳ ಕಲ್ಲನ್ನು ೨೦೦ ರೂ. ಕೊಟ್ಟು ತೆಗೆದುಕೊಳ್ಳದೆ ಇದ್ದ ಕಾರಣ ಬಹಿರಂಗವಾಗಿ ಹರಾಜು ಹಾಕಿದರು. ಯಾರೂ ಕೊಳ್ಳಲಿಲ್ಲ. ವಿಠ್ಠಲ ಐದು ರೂಪಾಯಿಗೆ ಸವಾಲು ಹಾಕಿ, ನಾಲ್ಕು ರೂಪಾಯಿ ಗಾಡಿಬಾಡಿಗೆ ಕೊಟ್ಟು ಮನೆಗೆ ಸಾಗಿಸಿದ.




ಇನ್ಸ್ಪೆಕ್ಟರು—ಏನ್ರಿ! ಸಂಸ್ಕೃತ ಪಂಡಿತರಿಗೆ ಕ್ರಾಸ್‌ವರ್ಡ್ ಹಣಬಂತಂತೆ ಹೌದೇ!

ಮುಂದಿನ ಬದಲಾವಣೆ

ಬೆಂಗಳೂರು **ಪ್ರಭಾತ್** ಚಿತ್ರ ಮಂದಿರದಲ್ಲಿ



★ ರಾಜಕಪೂರ್

★ ನರ್ಗೀಸ್

ಮತ್ತು

★ ನಿಮ್ಮಿ

ನಟಿಸಿರುವ

R K ಫಿಲಂಸ್‌ರವರ

# ಬರ್ಸಾತ್
# BARSAAT

ನಿರ್ದೇಶನ; ರಾಜಕಪೂರ್.

A Rajshri Release.

# WE GREET OUR PATRONS AGAIN IN 1950

WITH

## Jagat Pictures

# 'SHAIR'



**Creators of the Super Comedy**

**SUNHERE DIN**

SURAIYA

DEV-ANAND

KAMINIKAUSAL

AGHA & CUCKOO



## Now running to packed auditorium in Andhra Desa

Releasing shortly in Mysore State

FOR PARTICULARS:

## Hind Republic Pictures.

**185, Gandhi Nagar - - - Bangalore 2**




# VITOFERRIN

TRADE ITL MARK

ಶ್ರೇಷ್ಠತೆಯ ಹೆಗ್ಗುರುತು

---

# ವೈಟೋಫೆರಿನ್

## (ಆಧುನಿಕ ಶಕ್ತಿವರ್ಧಕ ಟಾನಿಕ್)

ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್‌ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತ ಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಖಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹ ದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ.



ತಯಾರಕರು :

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ, ಲಿಮಿಟೆಡ್**

**ಮಲ್ಲೇಶ್ವರಂ : : ಬೆಂಗಳೂರು 3.**










# ಕೊರವಂಜಿ

ಬಳೇಪೇಟೆ : : ಬೆಂಗಳೂರು 2

**ಬಿಡಿ ಪ್ರತಿ ಕೇವಲ ನಾಲ್ಕಾಣೆ**

ವಾರ್ಷಿಕ ಚಂದಾ : 3 ರೂ.ಗಳು (ಅಂಚೆ ವೆಚ್ಚ ಸಹಿತ)

## ನಮ್ಮ ಮಾರಾಟಗಾರರು

| | |
|---|---|
| ಶ್ರೀ ಕೃಷ್ಣ ಬ್ರದರ್ಸ್ | – ಚೆನ್ನರಾಯಪಟ್ಟಣ |
| ,, ಕರ್ಣಾಟಕ ಮಾಡರ್ನ್ ಅಡ್ವರ್‌ಟೈಜಿಂಗ್ ಸರ್ವಿಸ್ | – ಚಳ್ಳಕೆರೆ |
| ,, ಮಲನಾಡು ಸ್ಟೋರ್ಸ್ | – ಶ್ರಿಂಗೇರಿ |
| ,, ಯುಸ್. ನರಸಿಂಹಮೂರ್ತಿ | – ಚಿಕ್ಕಮುಗಳೂರು |
| ,, ಯುಸ್. ಯರ್. ರಂಗಪ್ಪಶೆಟ್ಟಿ | – ಬೇಲೂರು |
| ,, ರಾಮಸಂಜೀವಯ್ಯಶೆಟ್ಟಿ | – ಕುಣಿಗಲ್ |
| ,, ಜಿ. ವಿ. ಶಿವರಾಮಯ್ಯ | – ಗುಂಡ್ಲಪೇಟೆ |
| ,, ಬಿ. ಯುಸ್. ಸತ್ಯನಾರಾಯಣಶೆಟ್ಟಿ | – ನೆಲಮಂಗಲ |
| ,, ಯುಂ. ಯುಸ್. ಶ್ರೀನಿವಾಸಯ್ಯ | – ಮಳವಳ್ಳಿ |
| ,, ಸುಬ್ಬರಾಯಶಾಸ್ತ್ರಿ | – ಬೊಂಬಾಯಿ |
| ,, ಡಿ. ಶ್ರೀನಿವಾಸಯ್ಯಂಗಾರ್ | – ಕೊಳ್ಳೆಗಾಲ |
| ,, ಎ. ಯುಂ. ಸೀತಾರಾಮಯ್ಯ | – ಅರಕಲಗೂಡು |
| ,, ಹೆಚ್. ಯಂ. ಶಿವಲಿಂಗಯ್ಯ | – ಹೊಸಕೋಟೆ |
| ,, ಶಂಕರ ನಾರಾಯಣಮಯ್ಯ | – ಪುತ್ತೂರು ದ.ಕ. |
| ,, ಕೆ. ಎಸ್. ಉಪಾಧ್ಯಾಯ | – ಶಿಕಾರಿಪುರ |
| ,, ಐಯ್ಯರ್ ಬ್ರದರ್ಸ್ | – ಹುಣಸೂರು |
| ,, ಶಾಸ್ತ್ರಿ ಬ್ರದರ್ಸ್ | – ಟಿ. ನರಸೀಪುರ |
| ,, ಎಲ್ ಆರ್. ಸುಬ್ರಮಣ್ಯಐಯ್ಯರ್ | – ಲಂಕ ಬೆನಾರೀಸ್ |
| ,, ಶಿರಗೊಂಕರ್ ಬ್ರದರ್ಸ್ | – ಗೋಕಾಕ್ |
| ,, ವಾಸುದೇವಶೆನ್ಯೆ | – ತೀರ್ಥಹಳ್ಳಿ |
| ,, ಕೆ. ಯಂ. ವೀರೇಶ್ವರಯ್ಯ | – ಜಗಳೂರು |
| ,, ವೆಂಕಟಕೃಷ್ಣಭಟ್ಟ | – ಹರಿಹರಪುರ |
| ,, ಜೆ ರಂಗಯ್ಯ | – ಶಿರ |
| ,, ಬಿ. ಪಿ. ಯುಸ್. ರಾವ್ | – ಕಲ್ಕತ್ತ |
| ,, ಮಂಜರಾಬಾದ್ ಸ್ಟೋರ್ಸ್ | – ಸಕಲೇಶಪುರ |
| ,, ಜೈಹಿಂದ್ ನ್ಯೂಸ್ ಏಜೆನ್ಸಿ | – ಸೊರಬ |
| ,, ಆರ್. ವಿ. ರುದ್ರಯ್ಯ ಅಂಡ್ ಬ್ರದರ್ಸ್ | – ಹಿರಿಯೂರು |
| ,, ಕರ್ಣಾಟಕ ಮ್ಯೂಸಿಕ್ ಹೌಸ್ | – ಸಿಕಂದರಾಬಾದ್ |
| ,, ರಾಮಯ್ಯ | – ಕೆಂಗೇರಿ |

ಈಗ ಕಿಕ್ಕಿರಿದ ಜನಸಂದಣಿಗೆ ಪ್ರದರ್ಶಿತವಾಗುತ್ತಿದೆ !

**ಬೆಂಗಳೂರು ಶಾರದ ಮತ್ತು ಸಿಟಿ ಟಾಕೀಸ್‌ಗಳಲ್ಲಿ**

**ಕೆ. ಜಿ. ಎಫ್. ಗೇ ಟಾಕೀಸ್‌ನಲ್ಲಿ**



# ರತ್ನಕುಮಾರ್




ಶೀಘ್ರದಲ್ಲಿಯೇ ಮೈಸೂರು **ಚಾಮುಂಡೇಶ್ವರಿ** ಮತ್ತು **ಗಣೇಶ**
ಟಾಕೀಸ್‌ಗಳಲ್ಲಿ.—ಮತ್ತು ಇತರ ಕೇಂದ್ರಗಳಲ್ಲಿಯೂ ಸಹ.

**27-1-1950 ರಿಂದ ಅಮೋಘ ಪ್ರಾರಂಭ**

ಬೆಂಗಳೂರು **ಗೀತಾ** ಟಾಕೀಸ್‌ನಲ್ಲಿ



ಹಿಂದುಸ್ಥಾನ್ ಚಿತ್ರರವರ

# ಸಾವನ್-ಆಯಾ-ರೇ

(ಹಿಂದಿ)



**ಕಿಶೋರ್ ಸಾಹು, ರಮೋಲಾ, ಡೇವಿಡ್**

ಅಭಿನಯ

ಡೈರೆಕ್ಷನ್ :— **ಕಿಶೋರ್ ಸಾಹು**

## ದಿನವಹಿ 3 ಪ್ರದರ್ಶನಗಳು



DISTRIBUTORS :

# KAPURCHAND & Co.,

Chickpet : : : Bangalore City

Printed by B S Iyengar, Bangalore City
Publisher—B N Gupta Editor—M Sivaram.